॥ ಶ್ರೀ ದಿಗ್ವಿಜಯರಾಮೋ ವಿಜಯತೇ ॥

ಸುಶೀಲಾ
ಪ್ರಕಾಶನದ
33ನೇ ಪುಷ್ಪ

# ಶ್ರೀಮದುತ್ತರಾದಿ ಮಠದ ಯತಿಶ್ರೇಷ್ಠ ತ್ರಯರು

## ಶ್ರೀ ಸತ್ಯಬೋಧರು, ಶ್ರೀ ಸತ್ಯಸಂಧರು ಶ್ರೀ ಸತ್ಯಪರಾಯಣ ಶ್ರೀಪಾದಂಗಳವರು



ಶ್ರೀ ಸತ್ಯಬೋಧರಾಜೋವಿಜಯತೇ
ಮೂಲ ಬೃಂದಾವನ, ಸವಣೂರು

ಲೇಖಕರು : ಎಸ್. ಕೆ. ಬದರೀನಾಥ್



॥ ಶ್ರೀ ದಿಗ್ವಿಜಯ ರಾಮೋ ವಿಜಯತೇ ॥

# ಮುನ್ನುಡಿ

**॥ ಗುರುರೇಕಃ ಸದಾಸೇವ್ಯಃ ಸಂಸಾರತದ್ಧರಣಕ್ಷಮಃ ॥**

ಎಂಬ ಉಕ್ತಿಯಂತೆ, ಗುರುಗಳನ್ನು ಮುಖ್ಯವಾಗಿ ಯಾವಾಗಲೂ ಸೇವಿಸಬೇಕು. ಅದೇ ನಮ್ಮ ಸಂಸಾರ ಬಂಧನದಿಂದ ಬಿಡುಗಡೆಗೆ ಸಾಧನ. ಇಂಥಹ ಗುರುಗಳ ಸೇವೆಯನ್ನು ಅನೇಕ ರೀತಿಯಿಂದ ಮಾಡಬಹುದು. ಆ ಸೇವೆಗಳಲ್ಲಿ ಗುರುಗಳ ಮಹಿಮೆಯನ್ನು ಸಂಗ್ರಹಿಸಿ ಗುರುಭಕ್ತರಲ್ಲಿ ಅದನ್ನು ಪ್ರಕಾಶಪಡಿಸುವುದು ಉತ್ತಮವಾದ ಸೇವೆ. ಅಂಥಹ ಸೇವೆಯನ್ನು ನಿರಂತರವಾಗಿ ಮಾಡಿಕೊಂಡು ಬರುತ್ತಿರುವವರು ನಮ್ಮ ಶ್ರೀಮಾನ್ ಹರಿಗುರುಭಕ್ತರಾದ ಬದರೀನಾಥರಾಯರು. ಶ್ರೀ ಬದರೀನಾಥ್ ಅವರು ಈಗಾಗಲೇ ಬಹುಶಃ ನಮ್ಮ ಉತ್ತರಾದಿಮಠದ ಎಲ್ಲ ಸ್ವಾಮಿಗಳ ಚರಿತ್ರೆಯನ್ನು ಸಂಗ್ರಹಿಸಿ ಕಿರು ಹೊತ್ತಿಗೆಯಲ್ಲಿ ಪ್ರಕಟಿಸಿದ್ದಾರೆ. **ಪ್ರಕೃತ, ಶ್ರೀ ಶ್ರೀ ಸತ್ಯಬೋಧರು, ಶ್ರೀ ಶ್ರೀ ಸತ್ಯಸಂಧರು, ಶ್ರೀ ಶ್ರೀ ಸತ್ಯಪರಾಯಣರು ಈ ಯತಿತ್ರಯರ ಚರಿತ್ರೆಯನ್ನು ಹೊರತರುತ್ತಿದ್ದಾರೆ. ಇವರಿಗೆ ಯತಿತ್ರಯರು ಜ್ಞಾನ, ಭಕ್ತಿ, ವೈರಾಗ್ಯ ತ್ರಯವನ್ನು ಕೊಡಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.**

**– ಸತ್ಯಧ್ಯಾನಾಚಾರ್ಯ ಕಟ್ಟಿ**



॥ ಶ್ರೀ ಮೂಲರಾಮೋ ವಿಜಯತೇ ॥

ನನ್ನ
ವಿದ್ಯಾಗುರುಗಳು, ನಿತ್ಯನ್ಯಾಯಸುಧಾ ಪಾಠನಿರತರು,
ಪಂಡಿತಶ್ರೇಷ್ಠರು ಆದ ಶ್ರೀ ಸತ್ಯಧ್ಯಾನಾಚಾರ್ಯಕಟ್ಟಿಯವರ
ಪಾದಾರವಿಂದಗಳಲ್ಲಿ ಭಕ್ತಿಪೂರ್ವಕವಾಗಿ
**ಈ ಕೃತಿ ಪುಷ್ಪ ಅರ್ಪಿತ**

# ಅರಿಕೆ

ಆಶ್ರಮ ಪೂರ್ವದಲ್ಲಿ ಶ್ರೀ ಸತ್ಯಸಂಧರು, ಶ್ರೀ ಸತ್ಯಬೋಧರ ಮೊಮ್ಮಗ (ಮೊಮ್ಮಗಳ ಗಂಡ) ಹಾಗೂ ಶ್ರೀ ಸತ್ಯಪರಾಯಣತೀರ್ಥರು, ಶ್ರೀ ಸತ್ಯಸಂಧತೀರ್ಥರ ಪೌತ್ರರು. ಯತಿ ಶ್ರೇಷ್ಠತ್ರಯರಾದ ಈ ಶ್ರೀಪಾದಂಗಳವರ ದಿವ್ಯ ಚರಿತ್ರೆಯನ್ನು ಬರೆಯಲು ಉಪಕ್ರಮಿಸಲು ವಿಷಯಗಳು ನಾನಾ ಆಕರಗಳಿಂದ ಲಭಿಸಿದ್ದು, ಶ್ರೀ ಸತ್ಯಪರಾಯಣ ತೀರ್ಥರ ಕೃಪಾದೃಷ್ಟಿ ಅವರ ವಂಶಸ್ಥನಾದ ನನ್ನ ಮೇಲೆ ಹರಿಸಿದ ಫಲ ಎಂದರೆ ಉತ್ಪ್ರೇಕ್ಷೆಯೇನಲ್ಲ. ಶ್ರೀ ಸತ್ಯಬೋಧರ, ಶ್ರೀ ಸತ್ಯಸಂಧರ, ಶ್ರೀ ಸತ್ಯಪರಾಯಣ ತೀರ್ಥರುಗಳ ಅನುಗ್ರಹ. ಈಗಾಗಲೇ ಎರಡು ಮುದ್ರಣ ಕಂಡಿರುವ 'ಶ್ರೀ ಸತ್ಯಸಂಧರು' ಹಾಗೂ ಮೂರು ಮುದ್ರಣವಾರುವ 'ಶ್ರೀ ಸತ್ಯಪರಾಯಣತೀರ್ಥರ' ಪುಸ್ತಕಗಳನ್ನು ಯಥಾವತ್ತಾಗಿ ಸೇರಿಸಿ ಮುದ್ರಿಸಿದೆ.

**ನನ್ನ ವಿದ್ಯಾ ಗುರುಗಳು ಪ್ರೌಢ ಪಂಡಿತರು, ವೈದೀಕ ಪ್ರಪಂಚದಲ್ಲಿ ತಮ್ಮದೇ ಛಾಪನ್ನು ಮೆರಸಿರುವ ಹಾಗೂ ಲೌಕಿಕದಲ್ಲಿ ಕುಶಲರಾದ ಶ್ರೀ ಸತ್ಯಧ್ಯಾನಾಚಾರ್ಯ ಕಟ್ಟಿಯವರ ಆಶೀರ್ವಾದವೇ ಶ್ರೀರಕ್ಷೆ.** ನನಗೆ ಬದುಕಿದ್ದಾಗಲೂ, ಈಗಲೂ, ಮುಂದೆಯು ದಾರಿದೀಪವಾಗಿರುವ **ನನ್ನ ತಾಯಿ ಸುಶೀಲಾ (ನಾಗಮ್ಮ) ಬಾಯಿ, ತಂದೆ ಎಸ್.ಬಿ. ಕೃಷ್ಣಮೂರ್ತಿಯವರಿಗೂ ಅನಂತ ನಮನಗಳು.**

ನನ್ನ ಯಾವತ್ತು ಕಾರ್ಯಗಳಿಗೆ ಸಹಭಾಗಿಯಾಗಿರುವ **ಸಹಧರ್ಮಿಣಿ ಸುಮನಾ ಬದರೀನಾಥ್ ಹಾಗೂ ಮಕ್ಕಳು, ಅಳಿಯಂದಿರಿಗೂ, ಮೊಮ್ಮಕ್ಕಳಿಗೂ ರಾಮಾನುಗ್ರಹ** ಇರಲಿ.

ಈ ಕೃತಿಯಲ್ಲಿ ದೋಷವೇನಿದ್ದರೂ ಕ್ಷಮೆ ಇರಲಿ.

**– ಎಸ್.ಕೆ. ಬದರೀನಾಥ್**
**(ಸದರಮಿನ್)**

ಬೆಂಗಳೂರು
ತಾ॥ 2–02–2010

॥ ಶ್ರೀ ಮೂಲರಾಮೋ ವಿಜಯತೇ ॥

# ತಪಸ್ವಿ ಶ್ರೇಷ್ಠಯತಿ ಶ್ರೀ ಸತ್ಯಬೋಧ ತೀರ್ಥರು

ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವ ನಿಮಗಾ
ನಮಃ ಸ್ವಾಮಿನ್ ರಾಮ ಪ್ರಿಯತಮ ಹನೂಮಾನ್ ಗುರುಗುಣ।
ನಮಸ್ತುಭ್ಯಂ ಭೀಮ ಪ್ರಬಲ ತಮಕೃಷ್ಣೇಷ್ಟಭಗವನ್
ನಮಃ ಶ್ರೀ ಮನ್ಮಧ್ವಪ್ರದಿಶ ಸುದೃಶಂನೋ ಜಯ ಜಯ ॥57॥

(ಸುಮಧ್ವವಿಜಯ ಪುಟ 385)

ಸಕಲ ಇಂದ್ರಿಯಗಳನ್ನು ನಿಯಮನ ಮಾಡುವ ಹೇ, ಮುಖ್ಯ ಪ್ರಾಣ ದೇವನೇ, ನಿನ್ನನ್ನು ಮೊರೆಹೊಕ್ಕ ಸಜ್ಜನರನ್ನು ತತ್ವ ಜ್ಞಾನಾದಿ, ಐಶ್ವರ್ಯವನ್ನು ಕೊಡುವ ನಿಮಿತ್ತವಾಗಿ ಈ ಭುವಿಯಲ್ಲಿ ಅವತಾರ ಮಾಡಿರುವಿ. ಸ್ವಾಮಿಯಾದ, ಮುಖ್ಯ ಪ್ರಾಣನೇ ನೀನು ಶ್ರೀರಾಮ ದೇವರಿಗೆ ಅತ್ಯಂತ ಪ್ರೀತಿ ಪಾತ್ರರಾಗಿರುವಿಹೇ, ಹನುಮಂತ ದೇವನೇ ನಿನಗೆ ನಮಸ್ಕಾರಗಳು. ನೀನು ಗುರುಗಳಿಗೆ ಯೋಗೋಚ್ಯುತ ಗುಣಗಳನ್ನು ಹೊಂದಿರುವಿ. ಹೇ, ಭೀಮಸೇನ ದೇವನೇ, ನೀನು ಬಲಶಾಲಿಯೂ, ಜ್ಞಾನಾದಿಗಳನ್ನು ಐಶ್ವರ್ಯಾದಿಗಳನ್ನು ಹೊಂದಿದ್ದು ಭಗವಾನ್ ಶ್ರೀ ಕೃಷ್ಣನ ಅತ್ಯಂತ ಪ್ರಿಯನಾಗಿರುವಿ, ನಿನಗೆ ನಮಸ್ಕಾರಗಳು. ಹೇ, ಮಧ್ವಾಚಾರ್ಯರೇ, ನಮ್ಮಗಳಿಗೆ ಶ್ರೇಷ್ಟವಾದ ಜ್ಞಾನವನ್ನು ಕರುಣಿಸಿರುವಿರಿ, ಜಯವಾಗಲಿ, ಜಯವಾಗಲಿ ನಿಮಗೆ.

ಹನುಮ, ಭೀಮಾವತಾರಿಯಾಗಿ ಅವಿರ್ಭವಿಸಿದ, ಮಧ್ವಾಚಾರ್ಯರು ದ್ವೈತ ಸಿದ್ಧಾಂತ ಪ್ರತಿಪಾದಕರಾಗಿದ್ದಾರೆ. ಅವರ ಅನಂತರ ಅವರ ಪರಂಪರೆಯಲ್ಲಿ ಶ್ರೀ ಮದುತ್ತರಾದಿ ಮಠದಲ್ಲಿ ಬಂದ ಸುಪ್ರಸಿದ್ಧರಾದ ಯತಿ ಶ್ರೇಷ್ಠರು ದ್ವೈತ ಮತ ಪ್ರಚಾರವನ್ನು ಸಾರೋದ್ಧಾರವಾಗಿ ಇವತ್ತಿಗೂ, ಮುಂದೆಯೂ ಮುಂದುವರೆಸಿ ಕೊಂಡು ಬರುತ್ತಿದ್ದಾರೆ, ಬರುತ್ತಾರೆ. ಇಂಥಹ ಶ್ರೇಷ್ಠತಮವಾದ ಶ್ರೀ ಮೂಲ ಮಠವಾದ ಹಾಗೂ ಜಗತ್ಪ್ರಸಿದ್ಧವಾದ ಶ್ರೀ ಮದುತ್ತರಾದಿ ಮಠದಲ್ಲಿ ಶ್ರೀ ಸತ್ಯಬೋಧ ತೀರ್ಥರು ತಮ್ಮದೇ ಆದ ವಿಶಿಷ್ಟವಾದ ಸ್ಥಾನವನ್ನು ಗಳಿಸಿಕೊಂಡಿದ್ದಾರೆ. ಶ್ರೀ ಸತ್ಯ

ಬೋಧರು ಪರಮ ಸಾತ್ವಿಕ ಶಿರೋಮಣಿಗಳು, ವೈರಾಗ್ಯ ದುರಂಧರು, ಗುರು ಭಕ್ತಿ ಪರಾಯಣರು, ಶ್ರೀ ಮೂಲರಾಮ ಪೂಜಾಸಕ್ತರು ಹಾಗೂ ಶ್ರೀ ಸತ್ಯಪ್ರಿಯತೀರ್ಥ ರವರ ಕುಮಾರರು. ಶ್ರೀ ಸತ್ಯಪ್ರಿಯರಾದರೋ ತಮ್ಮ ಅಸಮಾನ ಭಕ್ತಿಯಿಂದ ಶ್ರೀ ಮುಖ್ಯಪ್ರಾಣನನ್ನು ಪ್ರತ್ಯಕ್ಷಿಸಿ ಕೊಂಡವರು. ಶ್ರೀ ಸತ್ಯಬೋಧರಾದರೋ ಕುಹಕಿಗಳ ಬಾಯಿಯನ್ನು, ನಡುರಾತ್ರಿಯಲ್ಲಿ ಮಾರ್ತಾಂಡನ ಪ್ರಖರವಾದ ಕಿರಣಗಳ ತೇಜೋರಾಶಿಯನ್ನು ತೋರಿಸಿ, ಮುಚ್ಚಿಸಿದ ಯತಿ ಕುಲಲಲಾಮರು. ಶ್ರೀ ಸತ್ಯ ಬೋಧತೀರ್ಥ ಶ್ರೀ ಪಾದಂಗಳವರು ಶ್ರೀ ಮದಾನಂದ ತೀರ್ಥರ ಮೂಲ ಮಠವಾದ ಶ್ರೀ ಮದುತ್ತರಾದಿ ಮಠದ ಯತಿಗಳ ಪರಂಪರೆಯಲ್ಲಿ ಆಚಾರ್ಯರಿಂದ ಮೊದಲುಗೊಂಡು 24ನೇಯವರು. ಶ್ರೀ ಸತ್ಯಬೋಧರು ತಮ್ಮ ವಿದ್ವತ್ತು ಹಾಗೂ ದ್ವೈತ ವೇದಾಂತದಲ್ಲಿ ಪ್ರಬುದ್ಧವಾದ ಪಾಂಡಿತ್ಯದಿಂದಲೂ ಹಾಗೂ ಅವರ ಗುರುಗಳಾದ ಶ್ರೀ ಸತ್ಯಪ್ರಿಯರಲ್ಲಿದ್ದ ಗುರುಭಕ್ತಿಗೆ ಅವರಿಗೆ ಅವರೇ ಸಾಟಿಯಾಗಿದ್ದರು. ಇಂಥಹ ಶ್ರೀ ಸತ್ಯಬೋಧರಿಗೆ ಶಿಷ್ಯರಾದ ಸತ್ಯಸಂಧರೋ ತಮ್ಮ ತಪೋ ಶಕ್ತಿಯಿಂದ, ಗುರುಗಳ ಅನುಗ್ರಹದಿಂದ ಪಂಢಾರಪುರದೊಡೆಯನಾದ ಪಾಂಡುರಂಗ ವಿಠಲನಿಗೆ ಮುದ್ರಾ ಪ್ರದಾನ ಮಾಡಿದವರು, ಅಲ್ಲದೇ, ಗಂಗೆಯನ್ನು ಸಾಕ್ಷಾತ್ತಾಗಿ ಪ್ರತ್ಯಕ್ಷಿಸಿಕೊಂಡು ಬಂಗಾರದ ಮರದ ಬಾಗಿನವನ್ನು ಇತ್ತ ಯತಿ ಪುಂಗವರು. ಇಂತಹ **ಪ್ರಾತಃ ಸ್ಮರಣೀಯರಾದ ಗುರು ಪರಂಪರಾವನ್ನು** ಹೊಂದಿರುವ **ಶ್ರೀ ಮದುತ್ತರಾದಿ ಮಠವು** ಹಿಂದೆಯು, ಇಂದಿಗೂ ಮುಂದೆಯೂ, ತನ್ನದೇ ಆದ ವೈಶಿಷ್ಟ್ಯವನ್ನು ಪ್ರತ್ಯೇಕತೆಯನ್ನು ಹೊಂದಿರುತ್ತದೆ.

ಶ್ರೀ ಸತ್ಯಬೋಧರ ಪೂರ್ವಾಶ್ರಮ ಪಿತೃಗಳ ಹೆಸರು ಶ್ರೀ ಹರಿಯಾಚಾರ್ಯರು ಹಾಗೂ ಅವರ ಮಾತೃಶ್ರೀಯವರ ಹೆಸರು ಅರಳಿ ಬಾಯಿ. ವೇದ ಶಾಸ್ತ್ರಗಳಲ್ಲಿ ಪ್ರಾವೀಣ್ಯತೆಯನ್ನು ಹೊಂದಿದ್ದ ಇವರು ಸದಾ ಪಾಠ, ಪ್ರವಚನಗಳಲ್ಲಿ ನಿರತರಾಗಿದ್ದರು. ಶ್ರೀ ಹರಿಯಾಚಾರ್ಯರ ತಂದೆಯವರ ಹೆಸರು ಶ್ರೀ ರಘುನಾಥಾ ಚಾರ್ಯರೆಂದು, ಹಾಗೂ ಇವರು ರಾಯಚೂರ ನಿವಾಸಿಗಳಾಗಿದ್ದರು. ಮಹಾಪಂಡಿತ ರಾದ ಶ್ರೀ ರಘುನಾಥಾಚಾರ್ಯರಲ್ಲಿಯೇ ಶ್ರೀ ಹರಿಯಾಚಾರ್ಯರು ವಿದ್ಯಾಭ್ಯಾಸ ಮಾಡಿ ತಮ್ಮ ತಂದೆಯ ಅಡಿ ಜಾಡುವಿನಲ್ಲಿಯೇ, ಪಾಠ ಪ್ರವಚನ ನಿರತರರಾಗಿದ್ದು, ಅದನ್ನು ಮುಂದುವರೆಸಿದರು. ಇವರಿಗೆ 4 (ನಾಲ್ಕು) ಜನರ ಮಕ್ಕಳಿದ್ದರೂ ಸಹ

ತಮಗೆ ಲೋಕ ವಿಖ್ಯಾತನಾದ ಹಾಗೂ ಮಧ್ವ ಸಿದ್ಧಾಂತದಲ್ಲಿ ಪ್ರಾವೀಣ್ಯತೆಯನ್ನು ಹೊಂದಿ, ಮಧ್ವ ಮತದ ಧ್ರುವತಾರೆಯಾಗುವಂಥ ಪುತ್ರಾಪೇಕ್ಷಿಯಾಗಿ ಆ ಹೋಬಲ ನರಸಿಂಹ ದೇವರನ್ನೇ ಕುರಿತು ಆರಾಧಿಸಿದರು. ದಂಪತಿಗಳಾದ ಶ್ರೀ ಹರಿಯಾಚಾರ್ಯರ ಹಾಗೂ ಅರಳೀಬಾಯಿಯ ಆರಾಧನೆ ಮತ್ತು ಮೊರೆಯನ್ನು ಲಾಲಿಸಿ ಪರಮ ದಯಾಮಯನಾದ ಪ್ರಹ್ಲಾದವರದ ಶ್ರೀ ನರಸಿಂಹ ದೇವರು ಪುತ್ರ ಸಂತಾನವನ್ನು ಅನುಗ್ರಹಿಸಿದರು. ಆ ಮಗುವಿಗೆ 'ರಾಮಾ' ಯೆಂದು ನಾಮಕರಣ ಮಾಡಿದರು. ಬೆಳೆಯುವ ಪೈರು ಮೊಳಕೆಯಲ್ಲಿ ನೋಡು ಎಂಬಂತೆ ಬಾಲಕ ರಾಮನು ತನ್ನ ಮೊದಲ ಗುರುವಾದ ಹರಿಯಾಚಾರ್ಯ ರಲ್ಲಿ ವಿದ್ಯಾಭ್ಯಾಸವನ್ನು ಆರಂಭಿಸಿದನು. ತೀಕ್ಷ್ಣಮತಿಯಾದ ಬಾಲಕನು ಏಕಗ್ರಾಹಿ ಯಾಗಿ ಕಾವ್ಯ, ವ್ಯಾಕರಣ ನ್ಯಾಯತರ್ಕ ಇತ್ಯಾದಿಗಳನ್ನು ಕಲಿಸಿದ್ದನ್ನು, ಶೀಘ್ರಗತಿಯಲ್ಲಿ ಕಲಿಯುವವನಾಗಿದ್ದನು. ಇಂತಹ ಶೀಘ್ರಮತಿಯಾದ ಬಾಲಕನಿಗೆ ಸರಿಯಾದ ಗುರುಗಳ ಬಳಿ ವಿದ್ಯಾಭ್ಯಾಸ ಮುಂದುವರೆಸಬೇಕೆಂದು ಬಯಸಿ ತಿರುಪತಿಯ ಶ್ರೀನಿವಾಸನ ದಿವ್ಯಚರಣಾರವಿಂದಗಳಲ್ಲಿ ಪ್ರಾರ್ಥನೆಯನ್ನು ಸಲ್ಲಿಸಿ, ಮುಂದಿನ ದಾರಿಯನ್ನು ತೋರಬೇಕೆಂದು ಬೇಡಿದರು. ಹಾಗೇ, ತಿರುಪತಿಯಲ್ಲಿರು ವಾಗ ತಮ್ಮ ಕುಲಗುರುಗಳಾದ ಶ್ರೀ ಮದುತ್ತರಾದಿ ಮಠದ ಯೋಗಿ ವರೇಣ್ಯರಾದ ಶ್ರೀ ಸತ್ಯಪ್ರಿಯತೀರ್ಥರು ಅಲ್ಲಿಯೇ ಸಂಚಾರತ್ವೇನ ಮೊಕ್ಕಾಂ ಮಾಡಿರುವರೆಂದು ತಿಳಿಯಿತು. ತಮ್ಮ ಅದೃಷ್ಟವನ್ನು ತಾವೇ ಮೆಚ್ಚಿಕೊಂಡು, ವರಪ್ರದ ಸಪ್ತಗಿರೀಶನನ್ನು ಕ್ಷಣ ಕ್ಷಣಕ್ಕೂ ನೆನೆಯುತ್ತಾ ಶ್ರೀ ಸತ್ಯಪ್ರಿಯ ತೀರ್ಥರ ಬಳಿಗೆ ತಮ್ಮ ಪತ್ನಿ, ಪುತ್ರ ರಾಮನೊಡನೆ ಬಂದು ಗುರುಗಳನ್ನು ಕಂಡು ಅವರ ಚರಣಾರವಿಂದಗಳಲ್ಲಿ ಸಾಷ್ಟಾಂಗ ನಮಸ್ಕಾರ ಹಾಕಿದರು.

ಶ್ರೀ ಸತ್ಯಪ್ರಿಯ ತೀರ್ಥರು, ಬಂದ ಆಚಾರ್ಯ ದಂಪತಿಗಳ ಕುಶಲೋಪರಿಯನ್ನು ವಿಚಾರಿಸಿ ತಾವು ಬಹುದಿನದಿಂದ ನಿರೀಕ್ಷೆಯಲ್ಲಿದ್ದ ಶಿಷ್ಯನನ್ನು ಕಂಡು ಶ್ರೀ ಮೂಲ ರಾಮನನ್ನು ಮನದಲ್ಲಿ ವಂದಿಸಿದರು. ಆಚಾರ್ಯರು ಮಾರನೇ ದಿನ ಶ್ರೀಗಳಲ್ಲಿ ಬಂದು ಭಕ್ತಿಭಾವದಿಂದ ತಮ್ಮ ಮಗ ರಾಮನ ಮುಂದಿನ ವಿದ್ಯಾಭ್ಯಾಸದ ಬಗ್ಗೆ ನಿವೇದಿಸಿದರು. ಶ್ರೀಗಳವರು ಶಾಂತ ಚಿತ್ತರಾಗಿ ಲಾಲಿಸಿ, ಏನೂ ಹೇಳದೆ, ಆಗಲಿ ಮಠದಲ್ಲಿ ಇರಿ, ಆ ವೆಂಕಟೇಶನ ಚಿತ್ತ ಹೇಗಿದೆಯೋ ಎಂದರು. ಹತ್ತು

ದಿನಗಳಾದರೂ, ಶ್ರೀಗಳವರು ಮೌನದಿಂದಿರುವುದನ್ನು ಕಂಡು ಹರಿಯಾಚಾರ್ಯರು ಧೈರ್ಯ ಮಾಡಿ ಒಂದು ದಿನ ಶ್ರೀಗಳವರಲ್ಲಿ ಬಂದು ತಾವುಗಳು ಊರಿಗೆ ಹೋಗಲು ಅಪ್ಪಣೆ ಬೇಡಿದರು. ಶ್ರೀಗಳವರು ಆಯಿತು. ಇನ್ನೂ ಕೆಲವು ದಿನಗಳು ಇಲ್ಲಿಯೇ ಇರಿ. ನಾವೇ ನಿಮಗೆ ಹೋಗುವುದನ್ನು ಹೇಳುವೆವುಯೆಂದರು. ಶ್ರೀ ಹರಿಯಾಚಾರ್ಯರು ಬರುವ ಕೆಲವೇ ದಿನಗಳ ಮುಂಚೆ ಒಬ್ಬ ವಿಪ್ರೋತ್ತಮನು ಶ್ರೀಗಳಲ್ಲಿ ಬಂದು ನಿಮ್ಮ ಮನಸ್ಸಿನಲ್ಲಿರುವ ಶಿಷ್ಯನೊಬ್ಬನು ಇಷ್ಟರಲ್ಲಿಯೇ ನಿಮ್ಮ ಬಳಿಗೆ ಬಳಿ ಬರುವನೆಂದು ಹೇಳಿದ್ದನು. ರಾಮನನ್ನು ನೋಡಿದ ಮೇಲೆ ಇವನೇ ಆ ಶಿಷ್ಯನೇಕಾಗಿರಬಾರದೆಂದು ಕೊಂಡರು. ಶ್ರೀ ಮೂಲರಾಮನೇ ಮುಂದೇ ಇವನಿಂದ ಪೂಜೆ ಮಾಡಿಸಿಕೊಳ್ಳುವುದಕ್ಕಾಗಿಯೇ ವಿಪ್ರವೇಷದಲ್ಲಿ ಬಂದು ಸೂಚನೆ ಮಾಡಿರಬೇಕೆಂದು, ಮನಸ್ಸಿಗೆ ತಂದುಕೊಂಡು ಶ್ರೀಗಳವರು ಆಚಾರ್ಯರನ್ನು ಮುಂದೆರೆಡು ದಿನಗಳಲ್ಲಿ ಕರೆಸಿಕೊಂಡು "ಆಚಾರ್ಯರೇ, ನಾವು ಹೇಳುವುದನ್ನು ಸಾವಧಾನವಾಗಿ ಕೇಳಿ ನಿಮ್ಮ ಮಗ ರಾಮನನ್ನು ನಮ್ಮ ಬಳಿ ವಿದ್ಯಾಭ್ಯಾಸಕ್ಕೆ ಬಿಡಿ, ನಾವೇ ಅವನಿಗೆ ಸಮಸ್ತ ವಿದ್ಯಾಭ್ಯಾಸವನ್ನು ಮಾಡಿಸುತ್ತೇವೆ. ಅವನು ಯಾರಿಗೂ ದ್ವಿತೀಯನಾಗದೇ ಕೀರ್ತಿ ಶಿಖರದ ತುತ್ತುದಿಯನ್ನು ಮುಟ್ಟಿ ಪೂರ್ಣಾಯುವಾಗಿರುತ್ತಾನೆ ಎಂದರು. ಆಚಾರ್ಯರ ಸಂತೋಷಕ್ಕೆ ಪಾರವಿಲ್ಲ, ರಾಮನ ಸಂತೋಷ ಪರಕಾಷ್ಟತೆಯ ಪರಮಾವಧಿಯನ್ನು ತಲುಪಿತು. ಅರಳಿಬಾಯಿ ಶ್ರೀಗಳವರ ಪರಮಾನುಗ್ರಹ ವಾಕ್ಯಗಳನ್ನು ಕೇಳಿ ಮೂಕ ವಿಸ್ಮಿತಳಾದರು. ಅದರಂತೆಯೇ, ಬಾಲಕ ರಾಮನನ್ನು ಶ್ರೀಗಳವರಲ್ಲಿ ಬಿಟ್ಟು ಆಚಾರ್ಯ ದಂಪತಿಗಳು ತಮ್ಮ ಊರಿಗೆ ಹಿಂದಿರುಗಿದರು. ಬಾಲಕ ರಾಮನು ರಾಮಾಚಾರ್ಯರಾಗಿ ಶ್ರೀಗಳವರ ಜೊತೆ ಜೊತೆ ಸಂಚಾರದಲ್ಲಿದ್ದು ಅವರಿಂದ ಶಾಸ್ತ್ರ, ವೇದ, ವೇದಾಂತ, ವ್ಯಾಕರಣ, ತರ್ಕ, ನ್ಯಾಯಗಳನ್ನು ಕಲಿತು ಕರಕಲಾಮಲ ಮಾಡಿಕೊಂಡರು. ಶ್ರೀಗಳವರು ಶ್ರೀ ಜಯತೀರ್ಥರ ಪ್ರಮಾಣ ಪದ್ಧತಿಯನ್ನು ಮೊದಲುಗೊಂಡು ಎಲ್ಲವನ್ನು ಅಭ್ಯಾಸ ಮಾಡಿಸಿ, ಕರುಣಾಮಯರಾಗಿ ಬಾಲಕ ರಾಮನನ್ನು ಸಲುಹಿ, ದೊಡ್ಡವನನ್ನಾಗಿ ಮಾಡಿ, ಪಂಡಿತ ಶ್ರೇಷ್ಟನನ್ನಾಗಿ ಮಾಡಿದರು. ಶ್ರೀ ಸತ್ಯಪ್ರಿಯರು ತಮ್ಮ 23 ವರ್ಷ ಕಿರಿಯ ಪಟ್ಟದವಧಿಯಲ್ಲಿ ತಮ್ಮ ಮುಂದಿನ ಅಧಿಕಾರಿಯನ್ನು ಹುಡುಕಿಟ್ಟುಕೊಂಡರು.

ಚತುಃಶಾಸ್ತ್ರಗಳಲ್ಲಿ ಚತುರಸ್ತ ಪಾಂಡಿತ್ಯ, ವಾದ ವೈದುಶ್ಯ ಹೊಂದಿ "ಶ್ರೀ **ಮನ್ನ್ಯಾಯ ಸುಧಾ**'ವನ್ನು ತಮ್ಮ ಪ್ರಿಯ ಶಿಷ್ಯರಾದ ರಾಮಾಚಾರ್ಯನು ವ್ಯಾಖ್ಯಾನ ವನ್ನು ಮಾಡಿ ಮಂಗಳವನ್ನು ಮಾಡಿದ್ದನ್ನು ಕಂಡು ಹರ್ಷಚಿತ್ತರಾಗಿ ಆಚಾರ್ಯರಿಗೆ ವಿವಾಹ ಸಮಯವೆಂದು ಬಗೆದು ಗಿರಿಜಾದೇವಿಯೆಂಬ ಸಿರಿಸಂಪನ್ನವಾದ ವಿಪ್ರನ ಪುತ್ರಿಯನ್ನು ಶ್ರೀ ಸತ್ಯಪ್ರಿಯರು ಲಗ್ನವನ್ನು ಮಾಡಿಸಿದರು. ಲಗ್ನವಾದ ನಂತರವು ರಾಮಾಚಾರ್ಯರನ್ನು ಅವರ ಪತ್ನಿಯನ್ನು ತಮ್ಮ ಮಠದಲ್ಲಿಯೇ ಇಟ್ಟುಕೊಂಡಿದ್ದರು. ಶ್ರೀ ರಾಮಾಚಾರ್ಯರು ಮಠದಲ್ಲಿದ್ದು ತಮ್ಮ ಶಿಷ್ಯರಿಗೆ ಬ್ರಹ್ಮಸೂತ್ರ, ಅನುವ್ಯಾಖ್ಯಾನ, ಶ್ರೀ ಮನ್ನ್ಯಾಯಸುಧಾ, ಮುಂತಾದ ಶ್ರೇಷ್ಟ ಗ್ರಂಥಗಳನ್ನು ಪಾಠ ಹೇಳುತ್ತಿದ್ದರು. ಒಮ್ಮೆ ಶ್ರೀಮಠದಲ್ಲಿ ಘನ ವಿದ್ವಾಂಸರಾಗಿದ್ದ ಪಾಂಡುರಂಗೀ ಆಚಾರ್ಯರು ಪೂಜೆ ಮಾಡುವ ಸಮಯದಲ್ಲಿ ಬಡ ರಾಮಾಚಾರ್ಯರು ಸಹ ಶಾಲಿಗ್ರಾಮ ಹಾಗೂ ಶಂಖವನ್ನಿಟ್ಟು ಕೊಂಡು ಪೂಜೆಗೆ ಕುಳಿತು ಮುಸುಕು ಹಾಕಿಕೊಂಡು ಜಪವನ್ನು ಮಾಡುತ್ತಿದ್ದರು. ಆಗ ಬಡಬ್ರಾಹ್ಮಣ ರಾಮಾಚಾರ್ಯನು ಏನು ಪೂಜೆ ಮಾಡುತ್ತಿದ್ದಾನೋ ಎಂಬ ಕುತೂಹಲದಿಂದ ಆಚಾರ್ಯರು ವೀಕ್ಷಿಸಲು ಅವರು ಕಂಡ ದೃಶ್ಯ ಅವರನ್ನು ಬೆಚ್ಚಿಬೀಳಿಸಿತು. ಅವರು ನೋಡಿದ್ದಾದರು ಏನು. ರಾಮಾಚಾರ್ಯರು ಪೂಜೆ ಮಾಡುವೆಡೆ ಭಯಂಕರವಾದ ಶ್ರೀ ಶ್ವೇತವರಾಹ. ರಾಮಾಚಾರ್ಯರು ಮುಸುಕು ತೆಗೆಯುವುದಕ್ಕೂ ಆಚಾರ್ಯರು ಶ್ವೇತ ವರಾಹವನ್ನು ನೋಡುವುದಕ್ಕೂ ಸರಿಹೋಯಿತು. ಶ್ರೀ ಶ್ವೇತವರಾಹವು ರಾಮಾಚಾರ್ಯರು ಮುಸುಕು ತೆಗೆದ ಕ್ಷಣದಲ್ಲಿ ಮಾಯವಾಯಿತು. ಆಶ್ರಮ ಪೂರ್ವದಲ್ಲಿಯೇ ಇಂತಹ ಮಹಿಮೆಯನ್ನು ತೋರಿದವರು ಶ್ರೀ ಸತ್ಯಬೋಧ ತೀರ್ಥರು.

ಶ್ರೀ ಸತ್ಯಪ್ರಿಯತೀರ್ಥರು ಸಂಚಾರತ್ವೇನ ಕಣ್ಣಾನೂರಿಗೆ ಬರಲು ಅವರಿಗೆ ಈ ಭುವಿಯ ಋಣ ಮುಗಿಯುತ್ತಿರುವುದೆಂದು ತಮ್ಮ ದಿವ್ಯದೃಷ್ಟಿಯಿಂದ ತಿಳಿದು ತಮ್ಮ ಬಳಿಯಲ್ಲಿದ್ದು ಗುರುಸೇವಾ ನಿರುತರಾಗಿದ್ದ ರಾಯಚೂರು ರಾಮಾಚಾರ್ಯ ರನ್ನು ಕರೆದು "ಮಹಾನ್ ಮಠವನ್ನು ಹೊರಲು ನೀವೆ ಯೋಗ್ಯರಿದ್ದೀರಿ. ಶ್ರೀ ಮೂಲ ರಾಮನು ನಿಮ್ಮಿಂದ ಪೂಜಾ ಸೇವೆಯನ್ನು ಬಯಸುತ್ತಾನೆ" ಎಂದು ಹೇಳಿ ಪವಿತ್ರವಾದ ಮಂತ್ರಾಕ್ಷತೆಯನ್ನೀಡಿ, ಶ್ರೇಷ್ಟವಾದ ವ್ಯಾಸ ಮುಷ್ಟಿಯನ್ನು ಶಿರದ ಮೇಲಿರಿಸಿ ತುರಿಯಾಶ್ರಮವನ್ನಿತ್ತು, ಶ್ರೀ **ಸತ್ಯಬೋಧರೆಂದು** ನಾಮಕರಣ

ಮಾಡಿದರು. ದ್ವೈತ ಸಾಮ್ರಾಜ್ಯದಲ್ಲಿ ಒಂದು ಧ್ರುವತಾರೆಯ ಉದ್ಭವವಾಯಿತು. ಶ್ರೀ ರಾಮಾಚಾರ್ಯರು ಆಶ್ರಮವನ್ನು ಸ್ವೀಕರಿಸಿದಾಗ 28 ವರ್ಷ ವಯಸ್ಸಾಗಿತ್ತು. ಹಾಗೂ, ನಾಲ್ಕು ವರ್ಷದ ಮಗುವನ್ನು ಹೊಂದಿದ್ದರು. ಹೆಂಡತಿ ಗಿರಿಜಾಬಾಯಿಯು ಮತ್ತೊಂದು ಮಗುವಿನ ನಿರೀಕ್ಷೆಯಲ್ಲಿದ್ದಳು. ಶ್ರೀ ಕಂಚಿ ಕೃಷ್ಣ ಸೂರಿಗಳು ತಾವು ಬರೆದ ಶ್ರೀ ಸತ್ಯಬೋಧ ವಿಜಯದಲ್ಲಿ ಹೀಗೆ ಹೇಳಿದ್ದಾರೆ.

**"ಈ ಸಂಸ್ಥಾನಕ್ಕೆ ನಾನು ಅಸಮರ್ಥನು, ಹೇಗೆ ರಕ್ಷಿಸಲಿ ಎಂದು ನಿಮಗೆ ಸಂದೇಹ ಬಂದರೆ, ನೀವು ಜ್ಞಾಪಕವಿಡಿ. ನಮ್ಮಿಂದ (ಶ್ರೀ ಸತ್ಯ ಪ್ರಿಯರಿಂದ) ಹಿಡಿದು ಚತುರ್ಮುಖ ದೇವರವರೆಗೆ ನಿಮ್ಮ ಬೆಂಬಲಕ್ಕೆ ಇದ್ದಾರೆ. ಮಿಗಿಲಾಗಿ ಶ್ರೀ ಮೂಲರಾಮ ದೇವರ, ಶ್ರೀ ಸೀತಾದೇವಿಯರ ಅನುಗ್ರಹವಿದೆ. ಅವರ ಕೃಪೆಯಿಂದ ನಿರ್ಭೀತರಾಗಿ ಸಂಸ್ಥಾನವನ್ನು ನಡೆಸುವಿರಿ"**

ಶ್ರೀ ಸತ್ಯಬೋಧರ ಜೀವನ ಹಾಗೂ ಅವರ ಸಾಧನೆಗಳನ್ನು ತಿಳಿಸುವ ಮೂರು ಸಂಸ್ಕೃತ ಕಾವ್ಯಗಳಿವೆ. ಒಂದು ಸತ್ಯ ಬೋಧ ವಿಜಯ, ಎರಡು ಶ್ರೀ ಪೂರ್ಣಬೋಧ ವಂಶ ಕಲ್ಪತರು ಹಾಗೂ ಮೂರನೇಯದು ಶ್ರೀ ಗುರು ವಂಶಾವಳಿ, ಶ್ರೀ ಸತ್ಯಬೋಧರು. ಶ್ರೀ ಸತ್ಯಬೋಧರು ಸುಮಾರು 40 ವರ್ಷಕ್ಕೂ ಹೆಚ್ಚು ವರ್ಷ (1664 ರಿಂದ 1705) ಶ್ರೀ ಮದುತ್ತರಾದ ಮಠದ ಪೀಠವನ್ನಲಂಕರಿಸಿದ್ದರು. ಇವರ ಕಾಲ ಸುವರ್ಣಯುಗವೆನ್ನಬಹುದು. ಮೊದಲನೆಯದಾಗಿ ಮಠ ಮಠಗಳಲ್ಲಿ ಅನ್ಯೋನ್ಯತೆ ಸೌಹಾರ್ದತೆ ನೆಲಸಿತ್ತು. ಎರಡನೇಯದಾಗಿ ವ್ಯಾಸ, ದಾಸ ಸಾಹಿತ್ಯಗಳು ಏಕ ಪ್ರಕಾರವಾಗಿ ವಿಜೃಂಭಿಸುತ್ತಿತ್ತು. ಕನ್ನಡಲ್ಲಿ ಮೇರುಕೃತಿಯೆಂದು ಪರಿಗಣಿಸಿರುವ ಹರಿಕಥಾಮೃತಸಾರದ ಕರ್ತೃಗಳಾದ ಶ್ರೀ ಜಗನ್ನಾಥ ದಾಸರು, ಶ್ರೀ ವಿಜಯದಾಸರು, ಶ್ರೀ ಗೋಪಾಲದಾಸರು ಮಹಾಸ್ವಾಮಿಗಳ ಸಮಕಾಲೀನರಾಗಿದ್ದರು. ಅಲ್ಲದೇ, ಹರಿಕಥಾಮೃತಸಾರದ ಬಹಳಷ್ಟು ಭಾಗವನ್ನು ಶ್ರೀ ಸತ್ಯಬೋಧರಿದ್ದ ಸವಣೂರಿನಲ್ಲಿ ಜಗನ್ನಾಥದಾಸರು ರಚಿಸಿದರಂತೆ. ಆರ್ಥಿಕ ಜನಚಿಂತಾಮಣಿ, ಸತ್ಕರುಣೆಯಾದ ಶ್ರೀ ಸತ್ಯಬೋಧರು ವ್ಯಾಸ ಹಾಗೂ ದಾಸ ಸಾಹಿತ್ಯಕ್ಕೂ ಬೆನ್ನೆಲಬಾಗಿದ್ದರೆಂದರೆ ಅತಿಶಯೋಕ್ತಿಯೇನಲ್ಲ, ಇವರನ್ನೂ ಶ್ರೀ ಜಗನ್ನಾಥದಾಸರು.

**"ಮರುತ ಮತಾಬ್ಧಿ ಚಂದಿರ ಚಾರು ಚರಿತ ಭೂಸುರ ಸನ್ನುತನೇ**
**ಪರಮ ಪುರುಷಕೃತ ಜಗನ್ನಾಥ ವಿಠಲನೇ ಅವರ ಪರಿಪರಿ ಮಹಿಮೆಗಳ ಬಲ್ಲ"**

ಎಂದು ಹಾಡಿ ಕೊಂಡಾಡಿದ್ದಾರೆ. ಅವರ ಮಹಿಮಾ ವಿಶೇಷಗಳು ಅಗಣಿತ ಹಾಗೂ ಲೌಕಿಕ ವ್ಯವಹಾರ ವಿದ್ವತ್ಪ್ರೇಮ ಅಪಾರ, ಆಶ್ರಮ ಪೂರ್ವದಲ್ಲಿ ದಟ್ಟ ದರಿದ್ರರಾಗಿದ್ದರೂ ಆಧ್ಯಾತ್ಮಿಕ ಹಾಗೂ ಪ್ರಾಚೀನ ಪರಂಪರೆಯ ಪ್ರತೀಕವೆಂದೇ ಪ್ರಖ್ಯಾತವಾಗಿರುವ ಹಾಗೂ ದ್ವೈತ ಸಾಮ್ರಾಜ್ಯದಲ್ಲಿ ತನ್ನದೇ ವಿಶಿಷ್ಟವಾದ ಸ್ಥಾನವನ್ನು ಗುರುತಿಸಿಕೊಂಡಿರುವ ಶ್ರೀ **ಮದುತ್ತರಾದಿ ಮಠದ ಸಿರಿ ಸಂಪತ್ತು ಅಧಿಕಾದಿ ಅಧಿಕ ಅಭಿವೃದ್ಧಿಗೊಳಿಸಿದ ಮತ್ತು ಕೀರ್ತಿ ಪತಾಕೆಯನ್ನು ನಭೋ ಮಂಡಲಕ್ಕೆ ಹಾರಿಸಿದ** ಪ್ರಖ್ಯಾತಿ ಶ್ರೀ ಸತ್ಯಬೋಧರರದು. ಶ್ರೀ ಸತ್ಯಬೋಧರ ಹೆಸರು, ಅವರ ಹೆಸರಿಗೆ ಸೀಮಿತವಾಗದೆ, ಸತ್ಯವಾಗಿಯೂ ಬೋಧರಾಗಿ ದೇಶಾದ್ಯಂತ ಸಂಚಾರ ಕೈಗೊಂಡು ದ್ವೈತ ಮತದ ಬೋಧನೆ ಮಾಡಿ ಪ್ರಸರಣ ಮಾಡಿದ ಯತಿ ಕುಲಲಲಾಮರು.

ಬಾಂಬೇ ಗೆಜಟೀಯರ್, ಕರ್ನಾಟಕ ಧಾರವಾಡ ಡಿಸ್ಟ್ರಿಕ್ಸ್, ಚಾಪಟರ್ 3, ಪುಟ 58-59, 1863ಗಳಲ್ಲಿ ಶ್ರೀ ಸತ್ಯಬೋಧರ ಬಗ್ಗೆ ಹೀಗೆ ನಮೂದಿಸಲಾಗಿದೆ.

During the rule of 38 years Sathya Bodha Thritha travelled all over India and was respected by all the princes of that time. He was learned and holy and performed such austerities that the people were afraid to approach him, lest he should discover their sins. At the same time he was most generous and popular and is held next in order of merit to Jayaraja Charya or third to the great Sarvagna. His name is so much revered that the Chief Branch of the Vaishnava sect, to which more than two thirds of the vaishnava people belong, is still known as Sathya bodha's sect. In his time the religious house called "Uttaradhi Mutt" at Savanur and subsequently after his name called Sathyabodha swamy's mutt.

ಶ್ರೀ ಸತ್ಯಬೋಧರ ಕಾಲದಲ್ಲಿ ಶ್ರೀ ಮದುತ್ತರಾದಿ ಮಠವು ಶ್ರೀ ಸತ್ಯಬೋಧ ಮಠವೆಂದೇ ಪ್ರಖ್ಯಾತವಾಗಿತ್ತು. ಇವತ್ತಿಗೂ ಆ ಕಾಲದ ಸರ್ಕಾರಿ ಕಾಗದ ಪತ್ರಗಳಲ್ಲಿ ಶ್ರೀ ಸತ್ಯಬೋಧಮಠವೆಂದೇ ದಾಖಲಾಗಿರುವುದನ್ನು ಕಾಣಬಹುದು. ಶ್ರೀಮಠದ ಉತ್ಕರ್ಷಕ್ಕೆ ಕಾರಣಿಭೂತರಾಗಿ ಶಕಪುರುಷರೆಂದೇ ವಿಖ್ಯಾತರಾಗಿದ್ದಾರೆ.

ಶ್ರೀ ಸತ್ಯಬೋಧರು ರುದಿರೋದ್ಗಾರಿ ಸಂವತ್ಸರದ ಚೈತ್ರ ಶುದ್ಧ ಬಿದಿಗೆಯೆಂದು (22-3-1743) ಸನ್ಯಾಶ್ರಮವನ್ನು ಪಡೆದರು. ಅವರು ಗುರುಗಳಾದ ಶ್ರೀ ಸತ್ಯ ಪ್ರಿಯರು 26-3-1743 ಶನಿವಾರದಂದು ಕಣ್ಣಾನೂರಿನಲ್ಲಿ ಶ್ರೀ ಮನ್ನಾರಾಯಣ ಪಾದಾರವಿಂದ ಸೇರಿದರು. ಶ್ರೀ ಸತ್ಯಪ್ರಿಯರು, ಅವರಿಗೆ ಪ್ರಿಯವಾದ ಪ್ರಾಣ ದೇವರು ಸಾಕ್ಷಾತ್ಕಾರವಾದ ಸ್ಥಳವಾದ ಮಾನಾಮಧುರೈನಲ್ಲಿ ತಮ್ಮ ವೃಂದಾನವನ್ನು ಕಟ್ಟ ಬೇಕೆಂಬ ಅಪೇಕ್ಷೆಯಂತೆ ಶ್ರೀ ಸತ್ಯಬೋಧರು ಕಣ್ಣಾನೂರಿನಿಂದ ಮಾನಾ ಮಧುರೆಗೆ ಗುರುಗಳು ದೇಹವನ್ನು ಸ್ಥಳಾಂತರಿಸಿ ಅಲ್ಲಿ ವೃಂದಾವನವನ್ನು ಕಟ್ಟಿದರು. ವೃಂದಾವನವು ತೇಜೋಮಯವಾಗಿದ್ದು ನೋಡಿದವರ ಮನದಲ್ಲಿ ಭಕ್ತಿಯೋದ್ಭವವುಂಟಾಗುತ್ತೆ. ಮಹಾ ಸಮಾರಾಧನೆ ಯನ್ನು ವಿಜೃಂಭಣೆಯಿಂದ ಮಾಡಿ ಮುಂದೆ ಸಂಚಾರ ಕೈಗೊಂಡರು. ರಾಮೇಶ್ವರ ದಲ್ಲಿ 40 ದಿನಗಳ ಕಾಲ ಇದ್ದು ಬ್ರಹ್ಮ ಸೂತ್ರ ಭಾಷ್ಯವನ್ನು ಶಿಷ್ಯರಿಗೆ ಆದ್ಯಾಪನ ಮಾಡಿ ಮಂಗಳವನ್ನು ಮಾಡಿದರು. ಅವರು ಶ್ರೀಮಠದ ಕಟ್ಟಡವನ್ನು ವಿಸ್ತರಿಸಲು ಭೂಮಿಯನ್ನು ಕೊಂಡರು. ಅಲ್ಲಿಂದ ಧನುಷ್ಕೋಟಿಗೆ ಪ್ರಯಾಣ ಮಾಡಿದರು. ದುಷ್ಟ ಬುದ್ಧಿಯನ್ನು ಹೊಂದಿದ್ದ ಗುರುರಾಜಾಚಾರ್ಯನೆಂಬ ವಿಪ್ರನು ತನಗೆ ಸಂಸ್ಥಾನಾಧಿಪತ್ಯ ಸಿಗಲಿಲ್ಲವೆಂಬ ಅಸಂತುಷ್ಟತೆಯಿಂದ ರಾಮನಾಥಪುರ ದೊರೆಗಳಿಂದ ಹೆಚ್ಚಿನ ಮಾನ್ಯತೆ ಪಡೆಯಲು ಹಾಗೂ ಹೇಗಾದರೂ ಶ್ರೀ ಮಠದ ಪೀಠವನ್ನು ತನ್ನದಾಗಿಸಿಕೊಳ್ಳಬೇಕೆಂಬ ಹೆಬ್ಬಯಕೆಯಿಂದ, ತನಗೆ ಶ್ರೀ ಮಠದ ಪೀಠ 'ವನ್ನು ಕೊಡಿಸಿದರೆ ಹತ್ತು ಸಾವಿರ ವರಹಗಳನ್ನು ಕೊಡುವೆನೆಂದು ರಾಜನಿಗೆ ಹೇಳಿ ದನು. ಅವನ ಮಾತನ್ನು ನಂಬಿ ಪಾವರೂ ನದಿಯ ಹತ್ತಿರ ಶ್ರೀ ಸತ್ಯಬೋಧರನ್ನು ಹಾಗೂ ಅವರ ಶಿಷ್ಯರ ಸಮ್ಮೇತ ಸಂಸ್ಥಾನವನ್ನು ಸುತ್ತವರೆದರು. ಶಿಕ್ಷರು ಅಂಜಿದ್ದನ್ನು ಕಂಡು ಮಹಾಸ್ವಾಮಿಗಳು ಅಭಯವನ್ನೀಡಿ ಆ ನದಿಯ ದಂಡೆಯ ಮೇಲೆ ಯಾವ ಆತಂಕವನ್ನು ಪಡದೇ ಶ್ರೀ ಮೂಲರಾಮನ ಪೂಜೆ ಮಾಡಲು ಪ್ರಾರಂಬಿಸಿದರು. ಆಗ ಒಂದು ವಿಚಿತ್ರ ವ್ಯಾಪಾರವುಂಟಾಯಿತು. ಇದ್ದಕ್ಕಿದಂತೆ ಮುತ್ತಿಗೆ ಹಾಕಿದ್ದ ಸೈನಿಕರಾದಿ ಎಲ್ಲರಿಗೂ ಉದರ ಶೂಲೆಯುಂಟಾಯಿತು. ಆಗ ತದೇಕ ಚಿತ್ತದಿಂದ ಶ್ರೀ ಮೂಲರಾಮನ ಪೂಜೆಯಲ್ಲಿ ನಿರತರಾದ ಮಹಾಸ್ವಾಮಿಗಳಲ್ಲಿ ಶರಣಾಗತರಾಗಿ ತಮ್ಮ ಸರ್ವಾಪರಾಧವನ್ನು ಮನ್ನಿಸಿ ಹಾಗೂ ತಮ್ಮ ಕರುಣಾವಾಹಿನಿಯನ್ನು ಪಾಪಿಗಳಾದ ನಮ್ಮ ಮೇಲೆ ಹರಸಿ ಪಾವನ ಮಾಡಬೇಕೆಂದು ಪರಿಪರಿಯಾಗಿ ಬೇಡಿಕೊಂಡರು.

ಸ್ವಾಮಿಗಳು, ಅವರನ್ನು ಕರುಣಿಸಿ, ಎಲ್ಲವೂ ಆ ಶ್ರೀರಾಮನ ದಯೆಯೆಂದರು. ಅಲ್ಲದೇ, ಶ್ರೀ ಮೂಲರಾಮ ದೇವರಿಗೆ ಅರ್ಪಿತವಾದ ಧೂಪಾರತಿಯ ಅಂಗಾರವನ್ನು ಕೊಟ್ಟು ಎಲ್ಲರೂ ಹಚ್ಚಿಕೊಳ್ಳಲು ಹೇಳಿದರು. ಉರಿಯುವ ಕೆಂಡವು ಶಮನವಾಗಿ ಅಂಗಾರವಾಗುವಂತೆ, ಉಲ್ಬಣಗೊಂಡಿದ್ದ ಉದರ ಶೂಲೆಯು ಅಂಗಾರದ ಲೇಪನದಿಂದ ಸಂಪೂರ್ಣವಾಗಿ ಶಮನವಾಗಿ ನಿವಾರಣೆಯಾಯಿತು. ಇವರ ಅತಿಶಯವಾದ ಮಹಿಮೆಯನ್ನು ಮನಗಂಡ ರಾಮನಾಥ ಪುರಾಧೀಶನು ಇವರಲ್ಲಿ ಬಂದು ತನ್ನ ಅಪರಾಧವನ್ನು ಮನ್ನಿಸಬೇಕೆಂದು ಬೇಡಿಕೊಂಡು ತನ್ನ ವಶಕ್ಕೆ ತೆಗೆದುಕೊಂಡಿದ್ದ ಮಠದ ಬೆಳ್ಳಿ, ಬಂಗಾರದ ಸಾಮಾನುಗಳನ್ನು ಹಿಂತಿರುಗಿಸಿ, ಅವುಗಳ ಜೊತೆ ಮತ್ತಷ್ಟು ಬಂಗಾರ, ಬೆಳ್ಳಿಯ ಪಾತ್ರೆಗಳನ್ನು ನೀಡಿದನು. ರಾಜನು ಶ್ರೀಗಳವರು ಅನುಗ್ರಹಿಸುವವರೆಗೂ ಪರಿಪರಿ ಬೇಡಿದನು. ಕರುಣಾಮೂರ್ತಿಗಳಾದ ಶ್ರೀಗಳವರು ಮನ್ನಿಸಿ, ಅನುಗ್ರಹ ಮಾಡಿ ಮಂತ್ರಾಕ್ಷತೆಯನ್ನು ನೀಡಿದರು. ಆರ್ಕಾಟ್ ನವಾಬನು ತಿರುಚನಾಪಳ್ಳಿಯಲ್ಲಿ ಮುರಾರಿರಾವ್ ಘೋರ್ಪಡೆಯಿಂದ ಕೋಟೆಯನ್ನು ಬಿಡಿಸಿಕೊಳ್ಳಲು ಶ್ರೀ ಸತ್ಯಬೋಧರ ಸಹಾಯ ಹಸ್ತವನ್ನು ಬೇಡಿದನು. ಸರದಾರ್ ಜ್ಞಾನೋಜಿರಾಯನ ಮಧ್ಯಸ್ತಿಕೆಯಿಂದ ಶ್ರೀಗಳವರು ಆರ್ಕಾಟ್ ನವಾಬನ ಪ್ರಾರ್ಥನೆಯನ್ನು ಮನ್ನಿಸಿ ಮುರಾರಿರಾವ್ ಘೋರ್ಪಡೆಗೆ ಹೇಳಿ ಕೋಟೆಯನ್ನು ತೆರವು ಮಾಡಿಸಿಕೊಟ್ಟರು. ಆದರೆ, ಆಶಾಬುದ್ಧನಾದ ನವಾಬನು ಬೆಳ್ಳಿ ಬಂಗಾರದ ವಸ್ತುಗಳನ್ನು ಆಭರಣಗಳನ್ನು ತನ್ನ ವಶಕ್ಕೆ ತೆಗೆದು ಕೊಂಡನು. ಈ ಮಧ್ಯೆ ಶಿಷ್ಯರನ್ನು ಏಕಾಂತದಲ್ಲಿ ಕರೆದು ಶ್ರೀ ಮೂಲರಾಮ ಸೀತಾದೇವಿಯರ ವಿಗ್ರಹವನ್ನು ವೇದವ್ಯಾಸ, ವಂಶರಾಮ ಹಾಗೂ ಪ್ರಸನ್ನ ವಿಠಲ ದೇವರನ್ನು ರಹಸ್ಯವಾಗಿ ತಿರುಚಿನಾಪಳ್ಳಿ ಬಳಿಯಲ್ಲಿದ್ದ ಭೀಮ ರಾಜನ ಮನೆಗೆ ಪೆಟ್ಟಿಗೆಗಳಲ್ಲಿ ಕೊಂಡಯ್ಯಲು ವ್ಯವಸ್ಥೆ ಮಾಡಿದರು.

**ದೃತ್ವಾಯುಕ್ತಃ ಸತ್ಯಬೋಧೋ ನಿತಾಂತಂ ಮಹಾತ್ಮ್ಯಂ ದರ್ಶಕೋ।**
**ದತ್ವಾಹಸ್ತೆ ಬ್ರಹ್ಮಣಾಂ ಪಂಚಪೇಟಿಃ ಪಂಚಾನಾನ್ತಾನ್ ದೇವ ಮುಕ್ತಾಃ ಪ್ರೇಷಯಾಮಾಸ ಸದ್ಯಃ॥**

ಅಲ್ಲದೇ ಶ್ರೀಗಳವರು 9 ದಿನಗಳ ಪರ್ಯಂತ ರಾಮದೇವರ ಪೂಜೆ ಮಾಡಿ ತೀರ್ಥವನ್ನು ಮಾತ್ರ ಸೇವಿಸುತ್ತಿದ್ದರು. ಜ್ಞಾನೋಜಿ ನಿಂಬಾಲ್ಕರ್‌ಗೆ ವಿಷಯ ತಿಳಿದು

ನವಾಬನಿಗೆ ಅವನ ತಪ್ಪನ್ನು ಮನವರಿಕೆ ಮಾಡಿಕೊಟ್ಟು ತನ್ನ ವಶಕ್ಕೆ ತೆಗೆದು ಕೊಂಡಿದ್ದ ಎಲ್ಲಾ ವಸ್ತುಗಳನ್ನು ಹಿಂದುರಿಗಿಸುವಂತೆ ಮಾಡಿದನು. ಅಲ್ಲದೇ, ನವಾಬನ ತಪ್ಪನ್ನು ಮನ್ನಿಸುವಂತೆ ಬೇಡಿಕೊಂಡನು.

ಶ್ರೀ ಸತ್ಯಬೋಧತೀರ್ಥರು ತಮ್ಮ ಚಾತುರ್ಮಾಸವನ್ನು ಶ್ರೀರಂಗದಲ್ಲಿ ಮುಗಿಸಿ ಕೊಂಡು ಜಂಬುಕೇಶ್ವರಕ್ಕೆ ಬಂದರು. ಅಲ್ಲಿಂದ ಮಾರ್ಗದಲ್ಲಿ ಭೀಮರಾಜನಿಂದ ಸತ್ಕೃತರಾಗಿ ಅವನಲ್ಲಿರಿಸಿದ್ದ ಪ್ರತಿಮೆಗಳನ್ನು ಮರಳಿ ಪಡೆದು ಶ್ರೀ ಮೂಲರಾಮ ಸೀತಾದೇವಿಯರನ್ನು ಬಹು ವಿಜೃಂಭಣೆಯಿಂದ ಪೂಜಾ ಮಾಡಿದರು. ಮುಂದೆ ಶ್ರೀಗಳಲ್ಲಿ ವಿಶ್ವಾಸವನ್ನು ಹೊಂದಿದ್ದು ತಂಜಾವೂರಿನಲ್ಲಿ ರಾಜ್ಯಭಾರ ಮಾಡುತ್ತಿದ್ದ ಮರಾಠ ಸರದಾರರದಲ್ಲಿ ಒಬ್ಬನಾದ ಪ್ರತಾಪ್ ಸಿಂಗ್ ಭೋನ್ಸ್ಲೆಯ ಆದರದ ಆಹ್ವಾನವನ್ನು ಮನ್ನಿಸಿ ಅಲ್ಲಿಗೆ ತೆರಳಿ ಅವನಿಂದ ಬಹುವಿಧವಾದ ಸತ್ಕಾರವನ್ನು ಪಡೆದು ಬೃಹದೇಶ್ವರ ದೇವಸ್ಥಾನದಲ್ಲಿ ವಾಸ್ತವ್ಯ ಹೂಡಿದರು ಹಾಗೇ ವಾಸ್ತವ್ಯ ಹೂಡಿದ ಸಮಯದಲ್ಲಿ ಮಧ್ವಮತದ ಪ್ರಸಾರವನ್ನು ಅವ್ಯಾಹತ ಮಾಡಲಾಯಿತು. ಶ್ರೀಗಳವರ ಉದಾತ್ತವಾದ, ಅಸ್ಖಲಿತ ವಾಕ್ಪ್ರವಾಹವು ಅಲ್ಲಿಯ ಭಗವದ್ಭಕ್ತರನ್ನು ಆಕರ್ಷಿಸಿ ಬಹಳಷ್ಟು ಜನರು ಮುದ್ರಾಧಾರಣೆ ಮಾಡಿಸಿಕೊಂಡು ಶ್ರೀ ಮಠದ ಶಿಷ್ಯರಾದರು. ಅನ್ಯಮತೀಯರು (ಪ್ರಮುಖವಾಗಿ ಅದ್ವೈತಿಗಳು)ಇದರಿಂದ ವ್ಯಾಕುಲಗೊಂಡು, ಮಹಾಸ್ವಾಮಿಗಳನ್ನು ವಾದ ಮಾಡಿ ಗೆಲ್ಲಲಾರದೇ ಸರದಾರನಲ್ಲಿ ತಮ್ಮ ಮತವನ್ನು ಸ್ವಾಮಿಗಳು ಹೀಗಳಿಯುತ್ತಿದ್ದಾರೆ ಎಂದು ದೂರಿದರು. ಆಗ ಅವರ ದೂರನ್ನು ಮನ್ನಿಸಿ, ತನ್ನ ಮುಖ್ಯಮಂತ್ರಿಯಾದ ವಿಠಲ ಬಾಬಾನನ್ನು ಕರೆದು ಇದನ್ನು ಶ್ರೀಗಳಲ್ಲಿ ವಿಚಾರ ವಿನಿಮಯ ನಡೆಸಿ ಸಮಸ್ಯೆಯನ್ನು ಬಗೆಹರಿಸುವಂತೆ ಹೇಳಿದನು. ಅಂತೆಯೇ, ವಿಠಲ ಬಾಬಾನು ಆ ಪಂಡಿತರ ಸಮೇತ ಶ್ರೀಗಳಲ್ಲಿ ಬಂದನು. ಆಗ ಶ್ರೀಗಳವರು ಯಾವ ದುರುದ್ದೇಶವಿಲ್ಲದೇ ಉದಾರ ಹೃದಯದಿಂದ ಬಂದ ಪಂಡಿತರನ್ನು ಜರತಾರಿ ಶಾಲು, ಬೆಳ್ಳಿಯ ಪಾತ್ರೆ ಹಾಗೂ ಸಂಭಾವನೆಯ ನ್ನೀಡಿ ತಮ್ಮ ಮನೋವೈಶಾಲ್ಯವನ್ನು ಪ್ರದರ್ಶಿಸಿದರು. ಬಂದಿದ್ದ ಪಂಡಿತರು ತಮ್ಮ ತಪ್ಪನ್ನರಿತು ಅಲ್ಲಿಂದ ಮುಂದೆ ಶ್ರೀಗಳವರಲ್ಲಿಗೆ ಆಗಾಗ್ಗೆ ಬಂದು ಸೌಹಾರ್ದಯುತ ವಾದ ವಾದ ವಿವಾದಗಳನ್ನು ಮಾಡುತ್ತಲಿದ್ದರು.

ಅಲ್ಲಿಂದ ಸಂಸ್ಥಾನವು ಕುಂಭಕೋಣ, ನಾಚಿಯಾರ್ ಗುಡಿಗೆ ಬಂದಿತು. ಅಲ್ಲಿ ಶ್ರೀಮಠದ ಸಂಪ್ರದಾಯ ಪ್ರವರ್ತಕರಾದ, ಪಂಚಾಭಿನವ ತೀರ್ಥರೆಂದೇ

ಪ್ರಖ್ಯಾತರಾದ ಶ್ರೀ ಸತ್ಯನಾಥ ತೀರ್ಥರವರ ಕುಮಾರರಾದ ಹಾಗೂ ಪಂಚಾಭಿನವಗಳಲ್ಲಿ ಒಬ್ಬೊರಾದ ಶ್ರೀ ಸತ್ಯಾಭಿನವ ತೀರ್ಥರ ವೃಂದಾವನೆದೆದರು, ಶ್ರೀ ಮೂಲರಾಮ ಸೀತಾದೇವಿಯರನ್ನು ವಿಜೃಂಭಣೆಯಿಂದ ಪೂಜೆ ಮಾಡಿ ಬ್ರಾಹ್ಮಣ, ಸುವಾಸಿನಿಯರಿಗೆ ಸಂತರ್ಪಣೆ ಮಾಡಿದರು. ಬಂದಿದ್ದ ಭಕ್ತ ಜನರು, ಸಂತರ್ಪಣೆಯೆಂದರೆ ಇದು ಎಂದು ಹಾಡಿ ಹೊಗಳಿದರು. ಅಲ್ಲಿಂದ ಮನ್ನಾರಗುಡಿ (ರಾಜಗೋಪಾಲಸ್ವಾಮಿ ದೇವಸ್ಥಾನ) ಮಾರ್ಗ ಶ್ರೀ ಮುಷ್ಣಕ್ಕೆ ಬಂದರು. ಶ್ರೀ ಮುಷ್ಣದಲಿ ಶ್ರೀಮದುತ್ತರಾದಿ ಮಠದ ಸಂಪ್ರದಾಯದಂತೆ ದಿವ್ಯಮಂಗಳ ಮೂರ್ತಿ ಗಳಾದ ಶ್ರೀಮೂಲರಾಮ ಸೀತಾದೇವಿಯರ ಜೊತೆ ವರಾಹ ದೇವರ ಉತ್ಸವ ಮೂರ್ತಿಗಳನ್ನಿಟ್ಟು ನೇತ್ರಾನಂದವನ್ನು ಉಂಟು ಮಾಡುವಂತೆ ಪೂಜೆ ಮಾಡಿ ನೆರೆದಿದ್ದ ಶಿಷ್ಯ ಜನರಲ್ಲಿ ಭಕ್ತ್ಯಾನಂದ ದ್ರೋಕಗೊಳಿಸಿದರು. ತಮ್ಮ ಎರಡನೆ ಚಾತುರ್ಮಾಸವನ್ನು ಅಲ್ಲಿಯೇ ಕೈಗೊಂಡು ಭಕ್ತ ಜನರನ್ನೂ ಕೃತಾರ್ಥಗೊಳಿಸಿದರು. ಆ ಸಂದರ್ಭದಲ್ಲಿ ಲಕ್ಷಪುಷ್ಪ, ಲಕ್ಷ ತುಳಸಿ ಪೂಜಾವನ್ನು ಕೈಗೊಂಡರು. ಒಂದು ಐತಿಹ್ಯದ ಪ್ರಕಾರ ಒಣಗಿದ ಜಾಜಿ ಹಾಗೂ ತುಳಸಿ ಗಿಡಗಳು ಮತ್ತೆ ಮತ್ತೆ ನಳಿ ನಳಿಸಿ ಮತ್ತು ಚಿಗುರಿ ಶ್ರೀ ಮೂಲರಾಮ, ಸೀತಾದೇವಿಯರ ಹಾಗೂ ವರಾಹ ಮೂರ್ತಿಗಳ ಪೂಜೆಯು ನಿರಾಂತಕವಾಗಿ, ಅವ್ಯಾಹತವಾಗಿ ನಡಿದವಂತೆ. ಇದು ಸತ್ಯ ಬೋಧರಿಗಲ್ಲದೇ ಮತ್ಯಾರಿಗೆ ಸಾಧ್ಯ. ಮುಂದೆ, ಅರಣಿಯ ವೆಂಕಟ ಪತಿರಾಜು ಹಾಗೂ ಆರ್ಕಾಟಿನ ದಿವಾನನಾದ ಶ್ರೀ ಕೃಷ್ಣಾಜಿ ಪಂತನ ಆಹ್ವಾನದ ಮೇರೆ, ವೃದ್ಧಾ ಚಲ, ಚಿದಂಬರ, ಪುದುಚೆರಿ ಮಾರ್ಗವಾಗಿ ಪಿನಾಕಿ ಹಾಗು ಜಿಂಜಿ ನದಿಗಳ ದಡದಲ್ಲಿರುವ ಬಹಳಷ್ಟು ಸ್ಥಳವನ್ನು ಸಂದರ್ಶಿಸಿ ಅಲ್ಲಿಂದ ವಿಷ್ಣು ಮಂಗಲವನ್ನು ಸೇರಿ, ಶ್ರೀ ಸತ್ಯ ವಿಜಯನಗರಕ್ಕೆ ಬಂದರು. ಅಲ್ಲಿ ತಮ್ಮ ಪರಮ ಗುರುಗಳಾದ ಶ್ರೀ ಸತ್ಯವಿಜಯತೀರ್ಥರ ವೃಂದಾವನದ ಬಳಿ ಶ್ರೀ ಮೂಲರಾಮ ಪೂಜಾ, ಶಿಷ್ಯರಿಗೆ ತಪ್ತ ಮುದ್ರಾವನ್ನು ನೀಡಿದರು. ನವರಾತ್ರಿಯನ್ನು ವೈಭವದಿಂದ ಆರಣಿಯಲ್ಲಿ ಮಾಡಿದರು. ಅಲ್ಲಿಂದ ಆರ್ಕಾಟ್‌ಗೆ ಹೋಗಿ ಕೃಷ್ಣಾಜಿ ಪಂತನಿಂದ ವಂದಿತರಾಗಿ, ಅವನು ಭಕ್ತಿಯಿಂದ ಶ್ರೀ ಮೂಲರಾಮ ರಾಮ ಸೀತಾದೇವಿಯರಿಗೆ ಸಮರ್ಪಿಸಿದ ಸುವರ್ಣಾಭರಣ ರಜತ ಪಾತ್ರೆಗಳನ್ನು ಸ್ವೀಕರಿಸಿದರು. ಕೃಷ್ಣಾಜಿ ಪಂತನು ಮಹಾಸ್ವಾಮಿಗಳಿಗೆ ಕನಕಾಭಿಷೇಕವನ್ನು ವೈಭವದಿಂದ ಮಾಡಿ ಅವರ ವಿಶೇಷ ಕೃಪೆಗೆ ಪಾತ್ರನಾದನು. ಋಗ್ಭಾಷ್ಯದ ಮಂಗಳವನ್ನು ಮಾಡಿ ಬಡ ಶೋತ್ರಿಯ ಬ್ರಾಹ್ಮಣರಿಗೆ ಅನುಗ್ರಹ ಪೂರ್ವಕವಾಗಿ ಜರತಾರಿ ಪಂಚೆ, ಒಂದು ತೊಲ ತೂಗುವ ಬಂಗಾರ

ವಸ್ತುಗಳನ್ನು ಹಾಗೂ ಬೆಳ್ಳಿಯ ಪಾತ್ರೆಗಳನ್ನು ತಮ್ಮ ಪೂಜ್ಯ ಗುರುಗಳಾದ ಶ್ರೀ ಸತ್ಯ ಪ್ರಿಯರ ಹೆಸರನ್ನು ಕೆತ್ತಿಸಿ, ಸಂಭಾವನೆ ಸಹಿತ ನೀಡಿ ಅವರ ಕೀರ್ತಿಯು ಎಲ್ಲಡೆಯು ಪಸರಿಸಿ ತಮ್ಮ ಹೆಸರು ಅಜರಾಮರಾಗುವಂತೆ ಶ್ರೀ ಮೂಲರಾಮನ ದಯೆಯಿಂದ ಮಾಡಿದರು. ಮುಂದುವರೆದು ದಿಂಡಿಗಲ್, ಧಾರಾಪುರ, ಮಧುರೆ ಮುಖಾಂತರ ತಮ್ಮ ಗುರುಗಳಾದ ಶ್ರೀ ಸತ್ಯ ಪ್ರಿಯ ತೀರ್ಥರ ಬೃಂದಾವನವಿರುವ ಮಾನಾ ಮಧುರೆಗೆ ಚಿತ್ತೈಸಿದರು. ಬೃಂದಾವನದ ಬಳಿ ಸುಮಾರು 120 ಮನೆಗಳನ್ನು ಕಟ್ಟಿಸಿ, ಆ ಮನೆಗಳಿರುವ ಅಗ್ರಹಾರವನ್ನು ಶೋತ್ರಿಯರಾದ ಬಡ ಬ್ರಾಹ್ಮಣರಿಗೆ ನೀಡಿದರು. ಗುರುಗಳನ್ನು ಸೇವಿಸಿ, ಮುಂದೆ ಕನ್ಯಾಕುಮಾರಿ ಮಾರ್ಗವಾಗಿ ಅನಂತ ಪದ್ಮನಾಭನ ಕ್ಷೇತ್ರವಾದ ತಿರುವನಂತಪುರಕ್ಕೆ ಬಂದರು. ಅಲ್ಲಿ ಅನಂತ ಪದ್ಮನಾಭ ಮತ್ತು ಜನಾರ್ಧನನನ್ನು ಸೇವಿಸಿದರು. ಅಲ್ಲಿಯ ರಾಜನು 3 ಗ್ರಾಮಗಳನ್ನು ನೀಡಿದನು. ಸಂಸ್ಥಾನವು ಅಲ್ಲಿಂದ ಪುನಃ ಮಾನಾಮಧುರೆಗೆ ಬಂದಿತು. ಆಗ ಮಧುರೈ ಪ್ರಾಂತವೆಲ್ಲಾ ಬರಗಾಲ ಪೀಡಿತವಾಗಿತ್ತು. ತಮ್ಮ ಗುರುಗಳಲ್ಲಿ ವೈಭವಯುತ ಪೂಜೆ ಮಾಡಿ ಆ ಪ್ರಾಂತದಲ್ಲೆಲ್ಲಾ ವರುಷವನ್ನು ಸುರಿಸಿ ಹರುಷವನ್ನು ಸಂತಸವನ್ನು ಮೂಡಿಸಿದರು. ಅಲ್ಲಿಯ ರಾಜನು ಶ್ರೀ ಸತ್ಯಬೋಧರ ಪಾದ ಸ್ಪರ್ಷದಿಂದ ತನ್ನ ರಾಜ್ಯವು ಪುನೀತವಾಗಿ ಧಾರಾಕಾರ ಮಳೆ ಸುರಿಯುತ್ತೆಂದು ತಿಳಿದು ಮೂರು ಗ್ರಾಮಗಳನ್ನು ಬಳುವಳಿಯಾಗಿ ನೀಡಿದನು.

ಶ್ರೀ ಸತ್ಯಬೋಧರ ಉತ್ಕರ್ಶವನ್ನು ಸಹಿಸಲಾರದ ಕೆಲ ಹಿತಶತೃಗಳು ಕರುಬಿ ಮಠದ ಪಾಚಕನ ಕೈಯಲ್ಲಿ ವಿಷ ಪ್ರಯೋಗ ಮಾಡಿಸಿದರು. ತಪೋನಿಷ್ಟರಾದ ಶ್ರೀಗಳವರು ಎಂದಿನಂತೆ ಶ್ರೀ ಮೂಲರಾಮ ದೇವರಿಗೆ ನೈವೇದ್ಯವನ್ನು ಸಮರ್ಪಿಸಿದರು. ನೋಡು ನೋಡುತ್ತಿದ್ದಂತೆಯೇ ದಿವ್ಯಮಂಗಳ, ಭುವನ ಮನೋಹರ ಮೂರ್ತಿ ಶ್ರೀರಾಮನ ಕಂಠವು ನೀಲಿಗಟ್ಟಿತು. ಆಗ ಪಾಚಕನು ಶ್ರೀಗಳವರಲ್ಲಿ ಆರ್ತನಾಗಿ ತನ್ನ ತಪ್ಪನ್ನೊಪ್ಪಿಕೊಂಡು ಪರಿಪರಿಯಲ್ಲಿ ಮನ್ನಿಸ ಬೇಕೆಂದು ಪ್ರಾರ್ಥಿಸಿದನು. ನಿಜವನ್ನರಿತ ಶ್ರೀಗಳವರು ತಮ್ಮ ಮೂಲರಾಮನಿಗೆ ಅರ್ಪಿತವಾದ ವಿಶಮಿಶ್ರಿತ ಆಹಾರವನ್ನೇ ತಾವು ಭುಂಜಿಸುವುದಾಗಿ ಹೇಳಿದರು. ಆಗ ಮಠದ ಸಿಬ್ಬಂದಿಯೆಲ್ಲಾ ಒಕ್ಕೊರಲಿನಿಂದ ನೈವೇದ್ಯವನ್ನು ಯಾವುದೇ ಕಾರಣಕ್ಕಾಗಿಯೂ ಭುಂಜಿಸಬಾರದೆಂದು ಆಗ್ರಹ ಪೂರ್ವಕವಾಗಿ ಪ್ರಾರ್ಥಿಸಿದರು. ತಮ್ಮ ರಾಮನಿಗೆ ಅರ್ಪಿಸಿದ ನೈವೇದ್ಯವನ್ನಲ್ಲದೇ ಮತ್ತೇನನ್ನು ಭುಂಜಿಸುವುದಿಲ್ಲ

ವೆಂದು ಹೇಳಿ, ಅಂತೆಯೇ ಭುಂಜಿಸಿದರು. ವಿಷವನ್ನುಂಡ ಶ್ರೀ ಗಳವರು ದಿನ ದಿನಕ್ಕೂ ಕೃಶರಾದರು. ಆಗ ಅಲ್ಲಿದ್ದ ಧನ್ವಂತರ್ಯೋಪಾಸಕನಾದ ಆಯುವೇದಾ ಚಾರ್ಯನು ಶ್ರೀಗಳವರನ್ನು ಪರೀಕ್ಷಿಸಿ ಪ್ರಾಣಕ್ಕೆ ಅಪಾಯವೇನಿಲ್ಲ, ಆದರೆ, ವಿಷದ ಪರಿಣಾಮ ಉಲ್ಬಣವಾಗದಿರಲು ಹಾಗೂ ಶಮನವಾಗಲು ರಾತ್ರಿ ಊಟ ಮಾಡಿ ಬೆಳಿಗ್ಗೆ ನಿದ್ರಿಸಬೇಕೆಂದು ಹೇಳಿದರು. ಅದರಂತೆ ಮಾಡಲು, ಕೆಲವು ಕುಹುಕಿಗಳು ಸನ್ಯಾಸಿಗಳಿಗೆ ರಾತ್ರಿ ಊಟ ನಿಶಿದ್ಧ ಹಾಗೇ ಮಾಡುವುದು ಸರಿಯಲ್ಲವೆಂದು ಟೀಕೆಯನ್ನು ಮಾಡಿದರು. ಕರ್ಣಾರ್ಕರ್ಣಿ ಶ್ರೀಗಳವರಿಗೆ ತಿಳಿಯಿತು. ಆಗ ಶ್ರೀಗಳವರು ಆ ಕುಹಕಿಗಳನ್ನು ಒಂದು ದಿನ ರಾತ್ರಿ ಬರ ಹೇಳಿದರು. ಅವರು ಬಂದ ನಂತರ ಶ್ರೀ ಮೂಲರಾಮ ಸೀತಾದೇವಿಯರನ್ನು ಬಹು ವೈಭವದಿಂದ ಪೂಜಾವನ್ನು ಮಾಡಿ ಆ ಕುಹುಕಿಗಳನ್ನು ಕರೆದು ಹೊರಗೆ ಹೋಗಿ ಆಕಾಶವನ್ನು ವೀಕ್ಷಿಸಲು ಹೇಳಿದರು. ಸರಿ ರಾತ್ರಿ 12 ಘಂಟೆ ಅಮಾವಾಸ್ಯೆಯೆಂದು ಆಕಾಶದಲ್ಲಿ ಪ್ರಖರ ಕಿರಣಗಳಿಂದ ಮಾರ್ತಾಂಡನು ತೇಜೋಮಯನಾಗಿ ಪ್ರಕಾಶಿಸುವುದನ್ನು ಕಂಡು ಕುಹಕಿಗಳ ಬಾಯಿಗೆ ಬೀಗ ಜಡಿಯಿತು. ತೇಜೋ ರೂಪನಾದ ಆದಿತ್ಯನ ಪ್ರಖರ ಕರಿಣಗಳೇ ಮುಖಕ್ಕೆ ರಾಚಿ ಅವರ ಮುಖವು ಮಸಿ ಬಳಿದ ಮುಖದಂತೆ ಕಪ್ಪಿಟ್ಟಾಗಿತ್ತು. ಒಮ್ಮೆಲೇ ಶ್ರೀಗಳವರ ಪಾದಕಮಲಕ್ಕೆರಗಿ ಕ್ಷಮಿಸಿ ಉದ್ಧಾರ ಮಾಡಬೇಕೆಂದು ಪರಿಪರಿಯಾಗಿ ಬೇಡಿದರು. ಇವರ ವರಕುಮಾರರಾದ ಶ್ರೀ ಸತ್ಯ ಸಂಧರು ಈ ಸಂದರ್ಭವನ್ನು ಬಹು ಸುಂರವಾಗಿ ಹೇಳಿದ್ದಾರೆ.

**ನೈವೇದ್ಯಗಂ ವಿಷಂರಾಮೇ ವಿಕ್ಷ್ಯಾತದ್ ಭುಕ್ತಿಗುರುಃ**
**ಯೋ ದರ್ಶಯುತ ರವೀಂರಾತ್ರಾ ಸತ್ಯಬೋಧಾಸ್ತು ಮೇ ಮುತ್ರೌದೇ ||**
**ಇದನ್ನೇ ಮರಾಠಿಯಲ್ಲಿಯು ವರ್ಣಿತವಾಗಿದೆ.**
**ಸತ್ಯಬೋಧಾಚ್ಯಾ ತಪೋಬಲೆ ರಾತ್ರಿ ದೃಷ್ಟೀ ಸ ರವಿ ಮಂಡಲ**
**ತೈಜೋ ಯುಕ್ತ ತೈ ಪಡಲೇ ಅದ್ಬುತ್ ಘಟಲೇ ಯಥಾ ವಾಸರೀ**

ತಂಜಾವೂರಿನ ಪ್ರತಾಪ್ ಸಿಂಗ್ ಭೋನ್ಸ್ಲೆಯ ರಾಜ ಗುರುವಿಗೆ ವಿನಾಕರಾಣ ಶ್ರೀ ಸತ್ಯಬೋಧರ ಮೇಲೆ ಎಲ್ಲಿಲ್ಲದ ಮಾತ್ಸರ್ಯ. ಹೇಗಾದರೂ ಮಾಡಿ ಶ್ರೀಗಳವರನ್ನು ಅವಮಾನ ಮಾಡಬೇಕೆಂದು ಬಗೆದು ರಾಜಗುರುವಾದ ಸೇತುಗೋ ಸ್ವಾಮಿ ಶ್ರೀಗಳವರರನ್ನು ತನ್ನ ಮನೆಗೆ ಭಿಕ್ಷಕ್ಕೆ ಆಮಂತ್ರಣವನ್ನು ನೀಡಿದನು. ಶ್ರೀಗಳವರು ಅದನ್ನು ಅರಿತು ಆಮಂತ್ರಣವನ್ನು ಮನ್ನಿಸಿದರು. ಶ್ರೀ ಮೂಲರಾಮನ ಪೂಜೆ,

ನೈವೇದ್ಯ, ಮಂಗಳಾರತಿ ಮುಗಿದ ಮೇಲೆ, ಗೋ ಸ್ವಾಮಿಯ ಶಿಷ್ಯರು ಶ್ರೀಗಳವರು ಕೂಡುವ ಸ್ಥಳಕ್ಕಿಂತ ಸ್ವಲ್ಪ ಎತ್ತರವಾದ ಸ್ಥಳದಲ್ಲಿ ಅವನು ಕೂಡುವ ವ್ಯವಸ್ಥೆ ಮಾಡಲು ಉದುಕ್ತರಾದರು. ಸುಳುಹುವನ್ನರಿತು ಶ್ರೀಗಳವರು ತಮ್ಮ ಶಿಷ್ಯರೊಬ್ಬರನ್ನು ಕರೆದು ಈ ದಿನ ಗೋಸ್ವಾಮಿಯು ಭಿಕ್ಷವನ್ನು ಏರ್ಪಡಿಸಿ ರುವುದರಿಂದ ಶ್ರೀಗಳವರ ಹಾಗೂ ಬ್ರಾಹ್ಮಣರ ಭೋಜನವಾಗುವ ತನಕ, ಎಲ್ಲಾ ಮೇಲ್ವಿಚಾರಣೆಯನ್ನು ಗೋಸ್ವಾಮಿಯೇ ನೋಡಿಕೊಂಡು ಆಮೇಲೆ ಊಟ ಮಾಡುವುದೆಂದು ಹೇಳಿ ಕಳುಹಿಸಿದರು. ಗೃಹಸ್ಥನೊಬ್ಬ ಮಹಾಸ್ವಾಮಿಗಳಿಗಿಂತ ಉಚ್ಚಾಸನದಲ್ಲಿ ಕೂತು ಅವರನ್ನು ಅವಮಾನಿಸುವುದನ್ನು ತಮ್ಮ ಚಾಣಾಕ್ಷತೆಯಿಂದ ನಿರಾಶೆಗೊಳಿಸಿದರು. ಕುಂಭಕೋಣದ ಮಠವು ಜೀರ್ಣಾವ್ಯಸ್ಥೆಯಲ್ಲಿದ್ದು ಅವನ್ನು ದುರಸ್ತಿಗೊಳಿಸ ಬೇಕಾಗಿತ್ತು. ಆದ್ದರಿಂದ ಉತ್ತರಾದಿ ಮಠದವರು ತಮ್ಮ ಪಾಠ ಪ್ರವಚನವನ್ನು ಚಿಂತಾಮಣಿ, ಕಾಮಾಕ್ಷಿ ಹಾಗೂ ಶ್ರೀನಿವಾಸ ಮಂಟಪಗಳಲ್ಲಿ ನಡೆಸುತ್ತಿದ್ದರು. ಇದನ್ನು ಸಹಿಸಿದವರು, ಹೇಗಾದರು ಮಾಡಿ ಇದನ್ನು ತಪ್ಪಿಸ ಬೇಕೆಂದು ಬಗೆದು ಒಮ್ಮೆ ಸತ್ಯ ಬೋಧರು ಚಿಂತಾಮಣಿ ಮಠಕ್ಕೆ ಜಪ ಮಾಡಲು ಹೋದಾಗ ಕಲ್ಲುಗಳು, ಮಳೆ ಇವರನ್ನು ಸ್ವಾಗತಿಸಿದರು. ಅದು ಪರಮತೀಯರ ಕೈವಾಡವೆಂಬ ವಿಷಯ ತಿಳಿದು, ತಮ್ಮ ಶಿಷ್ಯರಗಳಿಗೆ ಯಾವ ರೀತಿಯಲ್ಲಿಯೂ ಪ್ರತಿಭಟಿಸದಂತೆ, ಶಾಂತ ರೀತಿಯಲ್ಲಿರುವಂತೆ ಹೇಳಿದರು. ಆದರೆ ದುಷ್ಕೃತ್ಯ ವೆಸಗಿದ ಪರಮತೀಯರು ತಮ್ಮ ತಪ್ಪನ್ನು ಮುಚ್ಚಿಟ್ಟು ಕೊಳ್ಳಲು ಗೋಸ್ವಾಮಿಯ ಮುಖಾಂತರ ಮತದ್ವೇಶದಿಂದ ಶಾಂತಿಯು ಹದಗೆಡಲು ಶ್ರೀ ಸತ್ಯಬೋಧರೇ ಕಾರಣವೆಂದು ದೂರಿತ್ತರು. ಅಲ್ಲದೇ ಮಠದ ಕಟ್ಟಡವನ್ನು ಕೆಡುಹಿ ತಮ್ಮ ಅಪ್ಪಣೆ ಯನ್ನು ಪಡೆಯದೇ ಹೊಸದಾಗಿ ಕಟ್ಟಡವನ್ನು ಕಟ್ಟುತ್ತಿರುವರೆಂದು ಪ್ರತಾಪಸಿಂಘ್ ಭೋನ್ಸ್‌ಗೆ ದೂರಿತ್ತರು. ಆಗ ಆ ಸರದಾರನು ವಿಚಾರಣೆ ಮಾಡುವವರಿಗೂ ಮಂಟಪವನ್ನು ಉಪಯೋಗಿಸ ಬಾರದು ಹಾಗೂ ಕಟ್ಟಡವನ್ನು ಮುಂದುವರಿಸಬಾರದೆಂದು ಆದೇಶ ಹೊರಡಿಸಿದನು. ಶ್ರೀಗಳವರು ಸರದಾರನ ಪತ್ರದಂತೆ ಮುಂದುವರೆಯಲಿಲ್ಲ, ಮಾನಾಜಿ, ಶಾಲಾಕ ಗದೆರಾಜ ಇವರುಗಳು ಸರದಾರನಿಗೆ ಶ್ರೀ ಸತ್ಯಬೋಧರು ಅಪರೋಕ್ಷ ಜ್ಞಾನಿಗಳು, ಮಹನೀಯರು ಇವರಿಗೆ ತೊಂದರೆಯಾದರೆ ರಾಜ್ಯಕ್ಕೆ ಹಾನಿಯಾಗುವುದು. ಗೋಸ್ವಾಮಿಯು

ತಾನು ಬೆಳಸಿಕೊಂಡಿರುವ ಮಾತ್ಸರ್ಯ ದಿಂದ ಇಂಥಹ ದೂರನ್ನು ನೀಡಿರುವನು. ವಾಸ್ತವವಾಗಿ ಕೊಟ್ಟಿರುವ ದೂರು ಸತ್ಯಕ್ಕೆ ದೂರವಾಗಿರುವುದು ಎಂದು ಮನವರಿಕೆಯನ್ನು ಮಾಡಿ ಹಾಕಿದ್ದ ತಡೆಯನ್ನು ವಿಮುಕ್ತಿಗೊಳಿಸುವಲ್ಲಿ ಸಫಲರಾದರು. ಶ್ರೀ ಸತ್ಯಬೋಧರು ಮಠವನ್ನು ಕಟ್ಟಿಸಲು ಹಾಗೂ ಮಂಟಪಗಳನ್ನು ಮರಳಿ ಪಡೆಯಲು ಸಫಲರಾದರು. ಚಾತುರ್ಮಾಸ ವನ್ನು ಸದ್ಗೃಹಸ್ಥ ಕೋನೇರಿ ರಾಯನ ಪ್ರಾರ್ಥನೆಯನ್ನು ಮನ್ನಿಸಿ ಅಲ್ಲಿಯೇ ಮುಗಿಸಿಕೊಂಡು ಸಂಚಾರ ಮುಂದುವರೆಸಿದರು. ಭುವನಗಿರಿ ಮಾರ್ಗವಾಗಿ ಅರಣಿಗೆ ಬಂದು, ಪರಮ ಗುರುಗಳಾದ ಶ್ರೀ ಸತ್ಯವಿಜಯ ತೀರ್ಥರ ವೃಂದಾವನ ಪೂಜಾ ನೈವೇದ್ಯ ಮುಂತಾದುವನ್ನು ಮುಗಿಸಿಕೊಂಡು ವೆಲ್ಲೂರಿಗೆ ಬಂದರು. ಅಲ್ಲಿ ಹನ್ನೆರಡು ತಿಂಗಳ ಪರ್ಯಂತ, ತಮ್ಮ ಶಿಷ್ಯರಾದ ಕೌಮುದಿಕೃಷ್ಣಾಚಾರ್ಯ ಮುಂತಾದವರಿಗೆ ಗೀತಾಭಾಷ್ಯ, ಬ್ರಹ್ಮ ಸೂತ್ರ ಭಾಷ್ಯ, ಶ್ರೀ ಮನ್ನ್ಯಾಯ ಸುಧಾದಿ ಗ್ರಂಥಗಳನ್ನು ಕಲಿಸಿದರು. **ಈ ಕೌಮುದಿಕೃಷ್ಣಾಚಾರ್ಯರೇ 20 ಶ್ಲೋಕಗಳನ್ನೊಳ ಗೊಂಡ 'ಶ್ರೀ ಸತ್ಯಬೋಧ ವಿಜಯ'** ಎಂದು ಕಾವ್ಯವನ್ನು ರಚಿಸಿದ್ದಾರೆ.

ಮುಂದೆ ಘಟಿಕಾಚಲ, ತಿರುಪತಿಗಳಿಗೆ ಬಂದರು. ಅನುವ್ಯಾಖ್ಯಾನವನ್ನು ಪಠಿಸುತ್ತಾ ಗಿರಿಯನ್ನೇರಿದರು. ಮುಂದೆ ಕಡಪ ಮಾರ್ಗ ಅಹೋಬಲಕ್ಕೆ ನರಸಿಂಹ ದೇವರನ್ನು ದರ್ಶನ ಮಾಡಿದರು. ಕರ್ನೂಲಿನಲ್ಲಿ ಗುಂಡಮೆಟ್ಕಲ್ ಮುಖ್ಯಸ್ಥನಾದ ಮಲ್ಲರೆಡ್ಡಿಯಿಂದ ಸನ್ಮಾನಿತರಾಗಿ ಅವನಿತ್ತ ಆನೆಯ ಸಹಿತ ಹೈದರಾಬಾದಿಗೆ ಬಂದರು. ಪುಣೆಗೆ ಬಂದು ಗುರು ಮಿತ್ಕಲ್‌ನಲ್ಲಿ ಚಾತುರ್ಮಾಸಕ್ಕೆ ಕುಳಿತರು. ಅಲ್ಲಿರುವಾಗ ಶ್ರೀಗಳವರ ಪರಮ ಭಕ್ತನು, ಸವಣೂರು ಸಂಸ್ಥಾನದಲ್ಲಿ ಉನ್ನತ ಹುದ್ದೆಯನ್ನಲಂಕರಿಸಿದ್ದ, ಖಂಡೆರಾಯನು ಬಂದು, ಸವಣೂರಿಗೆ ಬರಬೇಕೆಂದು ವಿನೀತ ಭಾವನಾಗಿ ಪ್ರಾರ್ಥಿಸಿದನು. ಈ ಮಧ್ಯೆ ತಂಜಾವೂರಿನ ಗೋಸ್ವಾಮಿಯು, ಶ್ರೀ ಸತ್ಯಬೋಧರಲ್ಲಿ ಹಿಂದೆ ತಾನೆಸೆದ ದ್ರೋಹಕ್ಕೆ ಪ್ರತಿಫಲವಾಗಿ ಮಂತ್ರಿ ಪದವಿಯಿಂದ ವಂಚಿತನಾಗಿ ಮತ್ತೆ ಅವರಲ್ಲಿ ಶರಣು ಹೋಗಿ ಮಂತ್ರಿ ಪದವಿಯನ್ನು ಪುನಃ ಪಡೆದನು. ಶ್ರೀಗಳವರು ಗಜೇಂದ್ರ ಗಢ ಯಾತ್ರೆಯನ್ನು ಮುಗಿಸಿ ಹರಿಹರಕ್ಕೆ ಬಂದರು. ಶ್ರೀ ಸತ್ಯಬೋಧರಿಂದ ಉಪಕೃತನಾದ ಖಂಡೇ ರಾಯನು ತನ್ನ ಮಗನನ್ನು ಕಳುಹಿಸಿ ಸವಣೂರಿಗೆ ಬರಬೇಕೆಂದು ಪ್ರಾರ್ಥಿಸಿದನು.

ಗಂಗಾ ಸಾನ್ನಿಧ್ಯವುಳ್ಳ ತುಂಗಾ ನದಿಯನ್ನು ಬಿಟ್ಟು ಹೋಗುವುದೆಂತು ಎಂದು ಯೋಚಿಸುತ್ತಿಲು ಸ್ವಪ್ನದಲ್ಲಿ ಸೌಭಾಗ್ಯವತಿಯೊಬ್ಬಳು ಕಾಣಿಸಿಕೊಂಡು ಕಾರ್ತೀಕ ಮಾಸದಲ್ಲಿ ನೀವು ಯಾವ ಭಾವಿಗೆ ಹೋಗುವಿರೋ ಆ ಬಾವಿಗೆ ಹತ್ತಿರವಿರುವ ಅತ್ತಿಯ ಗಿಡದಿಂದ ಎಲ್ಲರ ಸಮಕ್ಷಮ ಗಂಗಾದೇವಿಯು ಉದ್ಭವಿಸಿ ಬರುವ ಳೆಂದೂ, ಅಲ್ಲಿಯವರೆವಿಗೂ ಖಂಡೇರಾಯನು ತುಂಗಭದ್ರಾಜಲವನ್ನು ನಿತ್ಯವು ನಿಮ್ಮ ಸ್ನಾನಕ್ಕೆ ಸದ್ಬ್ರಾಹ್ಮಣರಿಂದ ತರಿಸುವನು ಎಂದು ಹೇಳಿದಳು.

ಅಂತೆಯೇ, ಯತಿ ಪುಂಗವರಾದ ಶ್ರೀಗಳು ಸವಣೂರಿಗೆ ಹೊರಭಾಗದಲ್ಲಿದ್ದ ಒಳ್ಳೆ ನೀರಿದ್ದ ಭಾವಿಗೆ ಪಂಡಿತರೊಡಗೂಡಿ ಸ್ನಾನ ಮಾಡಲು ಬಂದಾಗ ಅಲ್ಲಿದ್ದ ಅತ್ತಿಗಿಡದ ಕೆಳಗೆ ನಿಂತು ಗಂಗಾದೇವಿಯನ್ನು ಸ್ತುತಿಸಲು ಅತ್ತಿಗಿಡದಿಂದ ಮುತ್ತಿನ ಮಾಲೋಪಾದಿಯಲ್ಲಿ ನೀರಿನ ಧಾರೆ ಸುರಿಯಿತು. ಆಗ ಸೂರ್ಯೋದಯ ವಾಗಿದ್ದು ಶ್ರೀಗಳು ಪಂಡಿತರಾದಿಯಾಗಿ ಸಮಸ್ತ ಭಕ್ತ ಜನರು ಗಂಗಾಸ್ನಾನ ಮಾಡಿದರು. ವಿಷ್ಣು ಪಾದೋದ್ಭವೆಯಾದ 'ಗಂಗಾ' ಪ್ರತ್ಯಕ್ಷಳಾದಳು ಎಂದು ಹೇಳಿ 'ವಿಷ್ಣು ತೀರ್ಥ' ವೆಂದು ಕರೆದರು. ಒಮ್ಮೆ ಶ್ರೀ ಬಾಬಾಚಾರ್ಯ ರಾಯಚೂರರವರ ಪರ್ಯಾಯ ಸಂದರ್ಭದಲ್ಲಿ ಶೂರ್ಪಾಲಯದಿಂದ ಶ್ರೀ ಕೃಷ್ಣಾಚಾರ್ಯಗಲಗಲಿ ಯವರು ಶ್ರೀಗಳವರು ತಮಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ತಮ್ಮ ಮಠಕ್ಕೆ ಬಾ, ಗಂಗಾ ಸ್ನಾನವಾಗುತ್ತದೆಯೆಂದು ಹೇಳಿದಂತಾಯಿತು ಎಂದು ತುಂಬಿದ ಸಭೆಯಲ್ಲಿ ಹೇಳಿದ ರಂತೆ. ಗಂಗೆಯನ್ನು ಸಾಕ್ಷಾತ್ಕರಿಸಿಕೊಂಡ ಶ್ರೀ ಸತ್ಯಬೋಧರು ದೈವಾಂಶಸಂಭೂತರು, ಯತಿ ಶ್ರೇಷ್ಟರು, ಮಹಾಸ್ವಾಮಿಗಳು ಮಹಾಸಂಸ್ಥಾನವನ್ನಾಳಿದ ಯತಿಕುಲೇಂದ್ರರು.

ಶ್ರೀ ಮದಾನಂದ ತೀರ್ಥರ ಸರ್ವಜ್ಞ ಪೀಠದಲ್ಲಿ ರಾರಾಜಿಸಿದ ಶ್ರೀ ಸತ್ಯಬೋಧ ತೀರ್ಥರು ಭಗವತ್ಪಾದರು ತೋರಿಸಿದ ಮಹಿಮೆಗಳನ್ನು ಅವರ ಪರಮಾನುಗ್ರಹ ದಿಂದ ಯಥಾಶಕ್ತಿಯಾಗಿ ಶ್ರೀ ಮದಾನಂದ ತೀರ್ಥ ಭಗವತ್ಪಾದರು ತೋರಿಸಿದ ಮಹಿಮೆಗಳ ಸ್ಮರಣೆ ಬರುವಂತೆ ಮಹಿಮೆಗಳನ್ನು ತೋರಿಸಿದ್ದಾರೆ.

1. ಶ್ರೀ ಭಗವತ್ಪಾದರು ಮಧ್ವ ಸರೋವರದಲ್ಲಿ ತಾವು ಆಶ್ರಮವನ್ನು ಸ್ವೀಕರಿಸಿದ ಆರಂಭದಲ್ಲಿಯೇ ಗಂಗೆಯನ್ನು ಪ್ರತ್ಯಕ್ಷ ಮಾಡಿಕೊಂಡರು ಮತ್ತು ಹಸ್ತಿನಾವತಿಯಲ್ಲಿ ಚಾತುರ್ಮಾಸಕ್ಕೆ ಕುಳಿತಾಗ ಗಂಗಾದೇವಿಯೇ ಶಾಖಾಭೇದದಿಂದ ಅವರಿದ್ದೆಡೆಗೆ ಬಂದು ಸೇವಿಸಿದಳು.

ಶ್ರೀ ಸತ್ಯಬೋಧರು ಈಗಿರುವ ವಿಷ್ಣುತೀರ್ಥದಲ್ಲಿ ಗಂಗಾದೇವಿಯನ್ನು ಸಾಕ್ಷಾತ್ಕರಿಸಿ ಸರ್ವರಿಗೂ ಗಂಗಾಸ್ನಾನ ಮಾಡಿಸಿದರು.

2. ಶ್ರೀ ಮದಾನಂದ ತೀರ್ಥರು ದೀಪನಂದಿದಾಗ ಚಂದ್ರಪ್ರಕಾಶ ಮಾಡಿ ತಮ್ಮ ನಖ ಕಾಂತಿಯಿಂದ ಪಾಠವನ್ನು ಶಿಷ್ಯರಿಗೆ ಹೇಳಿದರು.

ಶ್ರೀ ಸತ್ಯ ಬೋಧರು ನಡು ಇರುಳಿನಲ್ಲಿ ಮಾರ್ತಾಂಡನನ್ನು ಗಗನದಲ್ಲಿ ದರ್ಶನ ಮಾಡಿಸಿದರು.

3. ಪೂರ್ಣಬೋಧರು ನವಾಬನನ್ನು ಅವನ ತುರಷ್ಕ ಭಾಷೆಯಲ್ಲಿ ಮಾತನಾಡಿಸಿ ರಾಜ್ಯಾರ್ಧವನ್ನು ಕೊಡುವಂತೆ ಮಾಡಿದರು.

ಗುರುರಾಜ ಶ್ರೀ ಸತ್ಯಬೋಧರು ಸವಣೂರಿನ ನವಾಬನಿಗೆ ರಾಜಗುರುಗಳಾಗಿ ತಮ್ಮದೇ ಚಿತ್ರವುಳ್ಳ ನಾಣ್ಯಗಳನ್ನು ಟಂಕಿ ಚಲಾವಣೆಗೆ ತಂದರು.

4. ಆಸೇತು ಹಿಮಾಚಲವನ್ನು ಸಂಚರಿಸಿ ಪರವಾದಿ, ಪಂಡಿತರನ್ನು ಹೇಳ ಹೆಸರಿಲ್ಲದೇ ಸೋಲಿಸಿ ಹರಿ ಸರ್ವೋತ್ತಮತೆಯನ್ನು ಶ್ರೀ ಮದಾಚಾರ್ಯರು ಸ್ಥಾಪಿಸಿದರು. ದೂರ್ವಾದಿಗಳಾದ ಬುದ್ಧಿಸಾಗರ, ಪದ್ಮಪಾದ, ಪುಂಡರೀಕ ಪುರಿ ಮುಂತಾದವರನ್ನು ನಿಗ್ರಹಿಸಿದರು.

ಯತಿವರೇಣ್ಯರಾದ ಶ್ರೀ ಸತ್ಯಬೋಧರು, ವಾದೀಂದ್ರ ಸೇತು ಗೋಸ್ವಾಮಿ, ಪುಣೆಯ ಅದ್ವೈತ ಶಾಸ್ತ್ರಿಗಳನ್ನು ಖಂಡಿಸಿದರು. ತಾರತಮ್ಯ, ಪಂಚ ಭೇದಗಳನ್ನು ಪ್ರತಿಪಾದಿಸಿದರು.

5. ಶ್ರೀ ಭಗವತ್ಪಾದರು, ಬೀಜಾಂಕುರ, ಫಲ, ಪುಷ್ಪಗಳನ್ನು, ಧಾನ್ಯವನ್ನು ವೇದ ಪ್ರಾಮಾಣ್ಯದಿಂದ ಹಾಗೂ ಔಷಧಿ ಸೂಕ್ತವನ್ನೇಳಿ ತತ್‌ಕ್ಷಣದಲ್ಲಿ ಬೆಳೆಸಿದರು.

ಶ್ರೀ ಸತ್ಯಬೋಧರು ವೇದ ಸೂಕ್ತಗಳನ್ನು ಹೇಳಿ ಎಲ್ಲರ ಮನೆಯಲ್ಲೂ ಧಾನ್ಯ ಬೆಳೆಯುವಂತೆ, ದಕ್ಷಿಣ ದೇಶದಲ್ಲಿ ಕ್ಷಾಮವುಂಟಾದಾಗ ಮಾಡಿದರು. ಹಾಗೂ ಶ್ರೀ ಮೂಲರಾಮನನ್ನು ಒಲಿಸಿಕೊಂಡರು.

6. ಶ್ರೀಮದಾನಂದ ತೀರ್ಥರು ಶೇಷಾಂಶರಾದ ಪದ್ಮನಾಭ ತೀರ್ಥರಿಗೆ ಸಂಸ್ಥಾನವನ್ನು ಕೊಟ್ಟು ಅದೃಶ್ಯರಾದರು.

ಶ್ರೀ ಸತ್ಯಬೋಧ ಶ್ರೀ ಪಾದಂಗಳವರು ಪ್ರಹ್ಲಾದಂಶರಾದ ತಪಃಶ್ಚಕ್ರವರ್ತಿಗಳಾದ ಶ್ರೀ ಸತ್ಯಸಂಧರಿಗೆ ಆಶ್ರಮವನ್ನು ಕೊಟ್ಟು ಬೃಂದಾವನಸ್ಥರಾದರು.

ಎಲ್ಲಾ ಮಹಿಮೆಗಳನ್ನು ಶ್ರೀ ಸತ್ಯಬೋಧಸ್ವಾಮಿಗಳು ತಮ್ಮ ಮೂಲ ಗುರುಗಳಾದ ದ್ವೈತ ಮತ ಪ್ರತಿಷ್ಠಾಪನಚಾರ್ಯರಾದ ಶ್ರೀ ಮಧ್ವಾನಂದ ತೀರ್ಥರ ಕೃಪಾ ವಿಶೇಷದಿಂದ ತೋರಿಸಲು ಸಾಧ್ಯವಾಯಿತು. ಶ್ರೀ ಸತ್ಯಬೋಧರ ಮಹಿಮಾ ವಿಶೇಷವನ್ನೂ ಗಮನಿಸಿದರೆ ಶ್ರೀಗಳವರು ವಿಶ್ವದ ಪುರಾಣ ಪುರಷರಲ್ಲೊಬ್ಬರೆಂದು ಹೇಳಬಹುದು.

ಮತ್ತೊಂದು ವಿಶೇಷವೇನೆಂದರೆ, ಇವರಲ್ಲಿ ವಿದ್ಯಾಭ್ಯಾಸ ಮಾಡಿದ 4 ಜನ ಶಿಷ್ಯರೂ ಉತ್ತರಾದಿ ಮಠದ ಕ್ರಮವಾಗಿ ಪೀಠವನ್ನಲಂಕರಿಸಿದ ಮಹಾಮಹಿಮರು. ಶ್ರೀ ರಾಮಚಂದ್ರಾಚಾರ್ಯರು ಶ್ರೀ ಸತ್ಯಸಂಧರಾಗಿಯೂ ಅವರ ಅನಂತರ ಶ್ರೀಕೃಷ್ಣಾಚಾರ್ಯರು ಶ್ರೀ ಸತ್ಯವರರಾಗಿಯೂ ನಂತರ ನವರತ್ನ ಅಣ್ಣಯ್ಯಾಚಾರ್ಯರು ಶ್ರೀ ಸತ್ಯಧರ್ಮರಾಗಿಯೂ ಅವರ ಶಿಷ್ಯರಾಗಿ ನವರತ್ನ ಶ್ರೀನಿವಾಸಾಚಾರ್ಯರು ಸಂಸ್ಥಾನವನ್ನಾಳಿದರು.

ಶ್ರೀಗಳವರು ಖಂಡೇರಾಯನ ಆಗ್ರಹ ಪೂರ್ವಕ, ಭಕ್ತಿಯುತ ಮನವಿಯನ್ನು ಮನ್ನಿಸಿ ಸವಣೂರಿನಲ್ಲಿ ಚಾತುರ್ಮಾಸಕ್ಕೆ ಕುಳಿತರು. ವೇದ, ಶಾಸ್ತ್ರ, ವ್ಯಾಕರಣ, ತರ್ಕ ಮುಂತಾದುವುಗಳಲ್ಲಿ ತಮ್ಮಗಿದ್ದ ಸಾರ್ವಭೌಮತ್ವದಿಂದ ದೇಶದ ನಾನಾ ಮೂಲೆಗಳಿಂದ ಪಂಡಿತರನ್ನು ಆಕರ್ಷಿಸಿದರು. ಗಾರ್ಲಪಾಡ ಶ್ರೀನಿವಾಸಾಚಾರ್ಯ, ಪಾಂಡುರಂಗಿ ನರಸಿಂಹಾಚಾರ್ಯ, ಪಾಂಡುರಂಗಿ ಅಣ್ಣಯ್ಯಾಚಾರ್ಯ, ಲಕ್ಕುಂಡಿ ಆನಂದ ತೀರ್ಥಾಚಾರ್ಯ, ಅವರ ಮಗ ರಘುನಾಥಾಚಾರ್ಯ, ಬಂಕಾಪುರಂ ಭೀಮಾಚಾರ್ಯ, ಉಮರ್ಜಿ ರಾಮಕೃಷ್ಣಾ ಚಾರ್ಯ, ಗಲಿಗಲಿ ಮುದ್ಗಲಾಚಾರ್ಯ, ಅಣ್ಣಿಗೆರೆ ಜಯಾಚಾರ್ಯ ಇವರನ್ನು ಹೆಸರಿಸಬಹುದು. ಸುಮಾರು 100 ಜನ ಶಿಷ್ಯರು ಶ್ರೀಗಳವರಲ್ಲಿ ಶಾಸ್ತ್ರಾಭ್ಯಾಸ ಮಾಡುತ್ತಿದ್ದರು.

ಭೈರಾಂಖಾನ್ ಎಂಬ ಮುಸ್ಲಿಂ ಸರದಾರನು ಶ್ರೀ ಸತ್ಯಬೋಧರಲ್ಲಿ ಬಂದು ಸ್ವಾಮಿ ನಾನು ಕಟ್ಟಿಸಿರುವ ಮನೆಯಲ್ಲಿ ಒಂದು ಹಾವು ಸೇರಿಕೊಂಡಿದೆ. ಏನೇ ಪ್ರಯತ್ನ ಪಟ್ಟರು ಹೋಗುತ್ತಿಲ್ಲ, ತಾವು ನನ್ನ ಮೇಲೆ ಕೃಪೆ ಮಾಡಿದ್ದ ಅದು

ಮನೆಯಿಂದ ಹೋಗುವಂತೆ ಮಾಡಿ ಅದರ ಕಾಟದಿಂದ ಮಾಡಬೇಕೆಂದು ಪರಿಪರಿಯಾಗಿ ಪ್ರಾರ್ಥಿಸಿದನು. ಸ್ವಾಮಿಗಳು ಆ ಮನೆಗೆ ಚಿತ್ತೈಸಿ ಶ್ರೀ ಮೂಲರಾಮ ಸೀತಾದೇವಿಯರ ಪೂಜಾವನ್ನು ಮಾಡಲು ಪ್ರಾರಂಭಿಸಿದರು. ಹಾಗೇ ಒಂದು ಬಟ್ಟಲು ಹಾಲನ್ನಿಟ್ಟರು. ಪೂಜೆ ಮುಗಿಯುವ ಸಮಯ ಬಂದಾಗ, ಇನ್ನೇನು ಮಹಾಮಂಗಳಾರತಿ ಮಾಡಬೇಕೆನ್ನುವಾಗ ಎಲ್ಲಿಂದಲೋ ಬಂದು ಸರ್ಪವು ಬಂದು ಇಟ್ಟಿದ್ದ ಹಾಲನ್ನು ಕುಡಿಯಿತು. ಇದೇ ರೀತಿ ಮತ್ತೆರೆಡು ದಿನಗಳು ಪುನಾರವರ್ತನೆಗೊಳ್ಳಲು ಮೂರನೇ ದಿನ ಮಹಾಮಂಗಳಾರತಿ ಮಾಡಬೇಕೆನ್ನುವಾಗ ಒಬ್ಬ ಬ್ರಾಹ್ಮಣನು ಆವೇಶಗೊಂಡು ಆ ನಾಗರಾಜನ ಕೋರಿಕೆಯೇನು ಎಂದು ಹೇಳಿದನು. ಆ ನಾಗರಾಜನು ಎಲ್ಲಿ ಪ್ರಾಣ ಬಿಡುವನೋ ಅಲ್ಲಿ ಅಪಾರ ಧನವಿದೆಯೆಂತಲೂ, ಅದರ ಅರ್ಧಭಾಗ ಮಠಕ್ಕೆ ಸೇರಬೇಕೆನುತಲು, ಉಳಿದರ್ಧದಲ್ಲಿ ಅರ್ಧವನ್ನು ಬ್ರಾಹ್ಮಣರಿಗೆ ದಾನ ಮಾಡಬೇಕೆಂದು ಮತ್ತು ಇನ್ನರ್ಧವು ಆ ಸರದಾರನಿಗೆ ಸೇರಬೇಕೆಂದು ಹೇಳಿದನು. ಹಾಗೇ ಹೇಳಿದ ಮೇಲೆ ಆ ನಾಗರಾಜನು ಮನೆಯ ಒಂದು ಮೂಲೆಯಲ್ಲಿ ಅಸುನೀಗಿತು. ಅಲ್ಲಿ ಏಳು ಹುಂಡಿಗಳ ಬಂಗಾರದ ನಾಣ್ಯ ಸಿಕ್ಕಿತು. ಹಾಗೇ ಸಿಕ್ಕಿದ ನಾಣ್ಯದಿಂದ ಬೆಳ್ಳಿ ಬಂಗಾರದ ನಾಣ್ಯವನ್ನು ಒಂದು ಕಡೆ ಶ್ರೀ ಸತ್ಯಬೋಧರ ಚಿತ್ರವುಳ್ಳ ಮತ್ತೊಂದು ಕಡೆ "ಶ್ರೀ ಸತ್ಯಬೋಧರ ಗುರುರಾಜಿ – ಗುರುರಾಜವಿಜಯತೇ' ಎಂದು ಟಂಕಿಸಲಾಯಿತು.

ಅದೇ ಸಮಯದಲ್ಲಿ ಟಿಪ್ಪು ಸುಲ್ತಾನನು ಸವಣೂರನ್ನು ಮುತ್ತಿಗೆ ಹಾಕಿದನು. ಒಂದು ಲಕ್ಷವರಹಗಳನ್ನು ಸಂದಾಯ ಮಾಡಬೇಕೆಂದು ಷರತ್ತು ಹಾಕಿದನು. ನವಾಬನಿಗೆ ಏನು ಮಾಡಲು ತೋಚದೆ ತನ್ನ ದಿವಾನ ಖಂಡೇರಾಯನನ್ನು ಕಳುಹಿಸಿ ಶ್ರೀಗಳವರಿಂದ ಸಹಾಯವಾಗಿ ಹಣವನ್ನು ತರಲು ಕಳುಹಿಸಿದನು. ಶ್ರೀಗಳವರು ತಾವು ಟಂಕಿಸಿದ್ದ ನಾಣ್ಯಗಳನ್ನು ಖಂಡೇರಾಯನಿಗೆ ಕೊಟ್ಟು ಮಂತ್ರಾಕ್ಷತೆಯನ್ನೀಡಿ ಒಳ್ಳೆಯದಾಗುವುದುಯೆಂದರು. ಖಂಡೇರಾಯನು ಆ ನಾಣ್ಯಗಳನ್ನು ಟಿಪ್ಪು ಸುಲ್ತಾನನಿಗೆ ತಂದು ಕೊಡಲು ನಾಣ್ಯದ ಮೇಲೆ ಶ್ರೀಗಳವರ ಚಿತ್ರವನ್ನು ನೋಡಲು ಧಿಗ್ಗನೆದ್ದು ಕಣ್ಣಿಗೊತ್ತಿಗೊಂಡು, ಅಪರಾಧ ! ಅಪರಾಧ ! ಎಂದು ಹೇಳಿ ಆ ನಾಣ್ಯಗಳನ್ನು ಮರಳಿಸಿ, ಅವುಗಳ ಜೊತೆ 10,000 ವರಹಗಳನ್ನು ಸೇರಿಸಿ ಕಳುಹಿಸಿದನು. ಇದಲ್ಲವೇ ಶ್ರೀ ಸತ್ಯಬೋಧರ ಮಹಿಮೆ. ಮತ್ತೊಮ್ಮೆ

ಹೈದರಾಲಿಯು ಸವಣೂರಿಗೆ ಮುತ್ತಿಗೆ ಹಾಕಿದನು. ಆಗ ಮರಾಠ ಸರದಾರನಾದ ಗೋಪಾಲರಾಯನು ಶ್ರೀ ಸತ್ಯಬೋಧ ಶ್ರೀಪಾದಂಗಳ ಹಿತವಚನವನ್ನು ಉಲ್ಲಂ ಸಿ ಶಾಂತಿ ಮಾಡಿಕೊಳ್ಳದೇ ಯುದ್ಧ ಮಾಡಲು ಸೋತು ಸುಣ್ಣವಾದನು. ಯುದ್ಧ ಸಮಯದಲ್ಲಿ ಮಠದಲ್ಲಿದ್ದ 'ಜಯ' ಮತ್ತು 'ವಿಜಯ' ಆನೆಗಳನ್ನು ಉಪಯೋಗಿಸಿ ಕೊಂಡಿತ್ತು. ಹೈದರಾಲಿಯು ತಾನೇ ಕೊಟ್ಟಿದ್ದ ಈ ಎರಡು ಆನೆಗಳನ್ನು ಗುರ್ತಿಸಿ, ಶ್ರೀ ಸತ್ಯಬೋಧರ ಮೇಲಿದ್ದ ಗೌರವಾದರದಿಂದ ಸವಣೂರಿನ ಮೇಲೈ ಮಾಡುತ್ತಿದ್ದ ಯುದ್ಧದಿಂದ ಹಿಂದೆ ಸರಿದನು ಮತ್ತು ಆನೆಗಳನ್ನು ಪುನಃ ಹಿಂದಿರುಗಿಸಿದನು. ಹಿತವಚನವನ್ನು ಧಿಕ್ಕರಿಸಿದ್ದ ಗೋಪಾಲರಾಯನು ಶ್ರೀ ಸತ್ಯಬೋಧರ ಮಹಿಮೆ ಯನ್ನು ಕಣ್ಣಾರೆ ಕಂಡು ಮೂಕವಿಸ್ಮಿತನಾದನು. ಅಲ್ಲದೇ, ನವಾಬನು ಮಹಾಸ್ವಾಮಿ ಗಳು ತನ್ನನ್ನು, ತನ್ನ ರಾಜ್ಯವನ್ನು ರಕ್ಷಿಸಿ ಉದ್ಧಾರ ಮಾಡಿದ ಮಹಾಮಹಿಮರೆಂದು ಅರಿತು ಅವರನ್ನು ಸವಣೂರಿನಿಂದ ಹೋಗಲು ಬಿಡಲೇ ಇಲ್ಲ. ನವಾಬನ ಹಾಗೂ ದಿವಾನ ಖಂಡೇರಾಯನ ಪ್ರಾರ್ಥನೆಯನ್ನು ಮನ್ನಿಸಿ ಸವಣೂರಿನಲ್ಲಿ ತಮ್ಮ ಶೇಷಾಯುಷ್ಯವನ್ನು ಶ್ರೀ ಮೂಲರಾಮ ಸೀತಾದೇವಿಯರ ಪೂಜೆಯಲ್ಲಿ ಕಳೆದರು.

ತಮ್ಮ ಮುಂದಿನ ಉತ್ತರಾಧಿಕಾರಿಯನ್ನು ನೇಮನ ಮಾಡಲು ಯೋಚನೆ ಬಂದಾಗ ಆಶ್ರಮ ಪೂರ್ವ ಮೊಮ್ಮಗಳಾದ, ಶ್ರೀ ಸೇತುನಾರಾಯಣಾಚಾರ್ಯರ ಮಗಳಾದ ಸುಕನ್ಯಳನ್ನು ವರಿಸಿದ್ದ ಶ್ರೀ ರಾಮಚಂದ್ರಾಚಾರ್ಯರಿಗೆ ಕೊಡಬಯಸಿದರು. ಶ್ರೀ ಸೇತುನಾರಾಯಣಾಚಾರ್ಯರು ಶ್ರೇಷ್ಠ ಪಂಡಿತರಾಗಿದ್ದರು. ಶ್ರೀ ರಾಮಚಂದ್ರಾ ಚಾರ್ಯರು ಮಾವಸೇತು ನಾರಾಯಣಾಚಾರ್ಯರ ಹಾಗೂ ಪತ್ನಿ ಸುಕನ್ಯಾಬಾಯಿಯ ಸಮ್ಮತಿಯನ್ನು ಪಡೆದು ಶ್ರೀ ಸತ್ಯಬೋಧರಿಂದ ಆಶ್ರಮ ಸ್ವೀಕರಿಸಿದರು. ಶ್ರೀ ಸತ್ಯ ಬೋಧರು ರಾಮಚಂದ್ರಾಚಾರ್ಯರಿಗೆ ಆಶ್ರಮ ನೀಡಿ ಶ್ರೀ ಸತ್ಯಸಂಧರೆಂದು ನಾಮಕರಣ ಮಾಡಿದರು. ಮಹಾಜ್ಞಾನಿಗಳಾದ ಶ್ರೀ ಸತ್ಯಸಂಧರು ಪಂಢರಪುರದ ಪಾಂಡುರಂಗನಿಗೆ ಸಾಕ್ಷಾತ್ ಮುದ್ರಾವನ್ನಿತ್ತವರು. ಗಂಗೆಯನ್ನು ಸಾಕ್ಷಾತ್ಕರಿಸಿ ಕೊಂಡವರು. ಮಹಿಷಿಯ ಮಹಾಪ್ರಭುಗಳು ಹಾಗೂ ವಿಷ್ಣು ಸಹಸ್ರನಾಮಕ್ಕೆ ವ್ಯಾಖ್ಯೆಯನ್ನು ಬರೆದವರು. ಆಶ್ರಮವನ್ನಿತ್ತ ಮೇಲೆ ಶ್ರೀ ಸತ್ಯಬೋಧರು ತಮ್ಮ ದಿವ್ಯ ದೃಷ್ಟಿಯಿಂದ ನೋಡಲಾಗಿ ಶ್ರೀ ಸತ್ಯಸಂಧರು ಅಲ್ಪಾಯುಷಿಗಳೆಂದು ತಿಳಿದರು. ಆಗ 12 ಬಟ್ಟಲು ತುಪ್ಪವನ್ನು ಕುಡಿಯಲು ಕೊಟ್ಟರು. 10 ಬಟ್ಟಲು ಮಾತ್ರ ಸತ್ಯಸಂಧರಿಗೆ

ಕುಡಿಯಲಾಯಿತು. ಅವರು ಹತ್ತು ವರ್ಷ ಆಯಸ್ಸನ್ನು ಮಾತ್ರ ಪಡೆದರು. ಶ್ರೀ ಸತ್ಯಸಂಧರ ಸಾಕ್ಷಾತ್ ಮೊಮ್ಮಕ್ಕಳೇ ಶ್ರೀ ಸತ್ಯಪರಾಯಣ ತೀರ್ಥ ಶ್ರೀ ಪಾದಂಗಳವರು. ಇವರು ರಾಮಶಬ್ದಾರ್ಥ ರತ್ನ ಮಾಲಾ ಗ್ರಂಥವನ್ನು ಬರೆದು ಶ್ರೀ ರಾಮಶಬ್ಧಕ್ಕೆ 185 ರೀತಿಯಲ್ಲಿ ಅರ್ಥೈಸಿದ್ದಾರೆ. ಹಾಗೂ, ಮುಖ್ಯಪ್ರಾಣನನ್ನು ಸಾಕ್ಷಾತ್ಕರಿಸಿಕೊಂಡ ಯತಿಕುಲ ಲಲಾಮರು. ಶ್ರೀ ಮದುತ್ತರಾದಿ ಮಠದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿದವರು. ಇವರ ವೃಂದಾವನ ಸಂತೇ ಬಿದನೂರಿನಲ್ಲಿದೆ. ಹಸ್ತೋದಕ, ಸೇವಾ, ಮತ್ತಿತರ ಕಾರ್ಯಗಳಿಗೂ ಅನುಕೂಲವಿದೆ. ಉಳಿದು ಕೊಳ್ಳಲು ವಸತಿ ಸೌಕರ್ಯವೂ ಇದೆ. ಸಂಪರ್ಕಿಸುವ ವಿಳಾಸ : ಶ್ರೀ ಶ್ರೀನಿವಾಸ್ಚಾರ್ ದೂರವಾಣಿ ಸಂಖ್ಯೆ :

ಶ್ರೀ ಸತ್ಯಬೋಧರು ಫಾಲ್ಗುಣ ಕೃಷ್ಣ ಪ್ರತಿಪದೆಯೆಂದು ಶೋಭನ ನಾಮ ಸಂವತ್ಸರ 8ನೇ ಮಾರ್ಚ್ 1784ರಲ್ಲಿ ಬೃಂದಾವನಸ್ಥರಾದರು. ಶ್ರೀ ಜಗನ್ನಾಥ ದಾಸರು ಸಮರ್ಪಿಸಿದ ಮಂತ್ರಾಕ್ಷತೆ ತಟ್ಟೆ ಇವತ್ತಿಗೂ ಬೃಂದಾವನದ ಬಳಿಯಿದೆ. ಹಾಗೆಯೇ ಶ್ರೀಗಳವರು ದಾಸರಿಗೆ ಇತ್ತ ತಟ್ಟೆಯ ಮಾನ್ವಿಯಲ್ಲಿ ದಾಸರ ಸನ್ನಿಧಿಯಲ್ಲಿದೆ. ಶ್ರೀ ಸತ್ಯಬೋಧರ ಜೀವನ ಚರಿತ್ರೆಯು ಚಾರಿತ್ರಿಕವಾಗಿಯೂ, ಆಧ್ಯಾತ್ಮಿಕವಾಗಿಯೂ ಸುವರ್ಣಾಕ್ಷರದಲ್ಲಿ ಬರೆದಿಡುವಂತಹದು.

ಒಮ್ಮೆ ಸತ್ಯಬೋಧರ ಶಿಷ್ಯರಾದ ಸತ್ಯಸಂಧರು ಮಳಖೇಡಕ್ಕೆ ಹೋಗಿ ಶ್ರೀ ಜಯತೀರ್ಥರನ್ನು ಭಕ್ತಿಯಿಂದ ಪೂಜಿಸಲು, ಆಗ ಅವರಿಗೆ ಆಶ್ರಮವನ್ನಿತ್ತ ಶ್ರೀ ಸತ್ಯ ಬೋಧಕ ಸನ್ನಿಧಾನದವುಂಟಾಯಿತು. ಸ್ವಪ್ನ ಸೂಚಿತರಾಗಿ ಜಯತೀರ್ಥರ ಬೃಂದಾವನದ ಉತ್ತರದಲ್ಲಿ, ಅವರಿಗೋಸ್ಕರ, ತೀರ್ಥ, ಹಸ್ತೋದಕಗಳಾಗುವಂತೆ ಏರ್ಪಡಿಸಿದರು.

ಮಹಾಮಹಿಮರಾದ ಶ್ರೀ ಸತ್ಯಬೋಧರನ್ನು ನೆನೆನಿಸಿದ ದಿನ ಪುಣ್ಯಾದಿ ಪುಣ್ಯ ದಿನ. ದಿವ್ಯ ಮಂಗಳ ವೃಂದಾವನವನ್ನು ನೋಡಿದವರು, ಸೇವಿಸಿದವರು, ಅವರ ಚರಿತ್ರೆಯನ್ನೇ ಓದಿದವರು, ಕೇಳಿದವರು ಧನ್ಯಾಧಿಧನ್ಯರು.

* * *

ಶ್ರೀ ಮೂಲರಾಮೋ ವಿಜಯತೇ

## ತಪಸ್ಚಕ್ರವರ್ತಿ ಶ್ರೀ ಶ್ರೀ ಸತ್ಯಸಂಧತೀರ್ಥರು

ಶ್ರೀಮನ್ಮಹಾಭಾರತದ ಮಹಾಸಮುದ್ರದಲ್ಲಿ ಭಗವದ್ಗೀತೆ, ವಿಷ್ಣು ಸಹಸ್ರನಾಮ, ಭೀಷ್ಮಸ್ತವರಾಜ, ಅನುಸ್ಮೃತಿ ಮತ್ತು ಗಜೇಂದ್ರ ಮೋಕ್ಷವೆಂಬ ಐದು ಅನರ್ಘ್ಯರತ್ನಗಳುಂಟು. ಇವು ವಿಷ್ಣುವಿನ ಸರ್ವೋತ್ತಮತೆಯನ್ನು ಹೇಳುತ್ತವೆ. ವಿಷ್ಣುಸಹಸ್ರನಾಮವು ಪದ್ಮಪುರಾಣದಲ್ಲಿ ಎಪ್ಪತ್ತೆರಡನೆಯ ಅಧ್ಯಾಯದಲ್ಲಿ ಇರುತ್ತದೆ. ಅಂತೆಯೇ 149ನೇ ಅಧ್ಯಾಯದಲ್ಲಿ ಮಹಾಭಾರತದ ಅನುಶಾಸನ ಪರ್ವದಲ್ಲಿ ಬರುತ್ತದೆ. ಮಹಾಭಾರತದಲ್ಲಿ ಬರುವ ವಿಷ್ಣುಸಹಸ್ರನಾಮ ಸ್ತೋತ್ರವು ಹೆಚ್ಚಾಗಿ ಬಳಕೆಯಲ್ಲಿದೆ. ಶ್ರೀಮದ್ವಿಷ್ಣು ಸಹಸ್ರನಾಮವು ಮೋಕ್ಷಶಾಸ್ತ್ರವಾಗಿ ಪರಿಗಣಿಸಲ್ಪಟ್ಟಿದೆ.

ಅದ್ವೈತಮತ ಸಂಸ್ಥಾಪಕರಾದ ಶ್ರೀ ಶಂಕರಾಚಾರ್ಯರು, ವಿಶಿಷ್ಟಾದ್ವೈತ ಮತಾಚಾರ್ಯರಾದ ಪರಾಶರಭಟ್ಟರು ಹಾಗೂ ದ್ವೈತ ಮತದ ಶ್ರೀಉತ್ತರಾದಿ ಮಠಾಧೀಶರಾದ ಪರಮಪೂಜ್ಯರು ಮಹಾಮಹಿಮರು, ಪುಣ್ಯಪುರುಷರು, ಪ್ರಾತಃಸ್ಮರಣೀಯರು ಮೂಲರಾಮ ಹಾಗೂ ಸೀತಾದೇವಿಯ ಪೂಜಾ ರಾಧಕರೂ ಆದ ಶ್ರೀ ಶ್ರೀ ಸತ್ಯಸಂಧರು ವಿಷ್ಣುಸಹಸ್ರನಾಮಕ್ಕೆ ಭಾಷ್ಯವನ್ನು ಬರೆದಿದ್ದಾರೆ. ಇವುಗಳಲ್ಲದೇ ಶ್ರೀರಾಘವೇಂದ್ರ ಸೂರಿಗಳು ಸಹ ಭಾಷ್ಯವನ್ನು ಬರೆದಿದ್ದಾರೆ. ಶ್ರೀ ಸತ್ಯಸಂಧರ ಭಾಷ್ಯದ ಭಾಷೆಯು ಸಂಕ್ಷಿಪ್ತವಾಗಿ ಅರ್ಥ ಗರ್ಭಿತವಾಗಿ, ಸುಲಭ ಶೈಲಿಯಲ್ಲಿರುತ್ತದೆ. ಶ್ರೀಮನ್ಮಧ್ವಾಚಾರ್ಯರ ಸರ್ವಮೂಲ ಗ್ರಂಥಗಳಲ್ಲಿ ಆಳವಾಗಿ ಅವಗಾಹನೆಯನ್ನು ಶ್ರೀಸತ್ಯಸಂಧರು ಮಾಡಿರುವುದು ಎತ್ತಿ ತೋರಿಸುತ್ತದೆ. ಹಾಗೂ ಪದ, ವಾಕ್ಯ ಪ್ರಮಾಣ ಶಾಸ್ತ್ರರೀತ್ಯಾ ಅನುಗುಣವಾದ ಪದಾರ್ಥ ವಿವರಣೆ, ಅನೇಕಾರ್ಥ ಪ್ರದರ್ಶನ ಕೌಶಲ, ಶ್ರೀಮದಾಚಾರ್ಯರಲ್ಲಿ ಭಕ್ತಿ ಮತ್ತು ಭಗವದ್ಭಕ್ತಿಗಳನ್ನು ಒಳಗೊಂಡ ಅಮೂಲ್ಯ ಗ್ರಂಥವಾಗಿದೆ.

ಶ್ರೀ ಮನ್ಮಧ್ವಾಚಾರ್ಯರು ವಿಷ್ಣುಸಹಸ್ರನಾಮವನ್ನು ಭಾರತದ ಸಾರವೆಂದು ಹೇಳಿದ್ದಾರೆ. ಒಮ್ಮೆ ವಿಷ್ಣು ಭಕ್ತಿ ಸಾರ್ವಭೌಮರಾದ ಶ್ರೀಮದಾ

ಚಾರ್ಯರು ಪಯಸ್ವಿನೀ ನದಿಯ ದಡದ ಮೇಲಿದ್ದ ಒಂದು ದೇವಸ್ಥಾನದಲ್ಲಿದ್ದಾಗ ಚೆನ್ನಾಗಿ ವೇದಾಭ್ಯಾಸ ಮಾಡಿದ್ದ ಪಂಡಿತರು ಇವರನ್ನು ಪರಾಜಿತಗೊಳಿಸಬೇಕೆಂಬ ಉದ್ದೇಶದಿಂದ ಐತರೇಯೋಪನಿಷತ್ತಿನ ಒಂದು ಸೂಕ್ತವನ್ನು ಹೇಳಿ ಅದರ ಅರ್ಥವನ್ನು ಹೇಳಬೇಕೆನ್ನಲು ಶ್ರೀ ಮದಾಚಾರ್ಯರು ಹೇಳಿದುದಲ್ಲದೇ ವಿಷ್ಣುಸಹಸ್ರನಾಮದ ಪ್ರತಿಯೊಂದು ನಾಮಕ್ಕೂ ನೂರು ಅರ್ಥಗಳಿರುವುದೆನ್ನಲು ಆ ಪಂಡಿತರುಗಳು ಶ್ರೀಮದಾಚಾರ್ಯರು ಪರಾಜಿತರಾದಂತೆಯೇ ಎಂದು ಭಾವಿಸಿ ವಿಷ್ಣುಸಹಸ್ರನಾಮದ ಒಂದೊಂದು ನಾಮಕ್ಕೂ ನೂರು ಅರ್ಥ ಹೇಳಬೇಕೆನ್ನಲು, ಶ್ರೀಮದಾಚಾರ್ಯರು ಆ ಕ್ಷಣವೇ ಹೇಳುವುದಾಗಿಯೂ ಆದರೆ ಒಂದು ನಿಬಂಧನೆಯಂತೆ ಹೇಳುವುದಾಗಿ ಹೇಳಿದರು. ಅಂದರೆ ತಾವು ಯಾವ ರೀತಿಯಲ್ಲಿ ಅರ್ಥವನ್ನು ಹೇಳುವರೋ ಅದೇ ರೀತಿಯಲ್ಲಿಯೇ ಆ ಪಂಡಿತರು ಪುನಃ ಹೇಳಬೇಕೆನ್ನಲು ಅದು ಸುಲಭ ಸಾಧ್ಯವೆಂದು ಭಾವಿಸಿ ಅವರು ಒಪ್ಪಿದರು. ಶ್ರೀಮದಾಚಾರ್ಯರು ತತ್ ಕ್ಷಣವೇ ವಿಷ್ಣುಸಹಸ್ರನಾಮ ದ ವಿಶ್ವ ಎಂಬ ನಾಮಕ್ಕೆ ನಿರರ್ಗಳವಾಗಿ ಅರ್ಥ ವನ್ನು ಹೇಳಲು ಶುರು ಹತ್ತಿದಾಗ ಆ ಪಂಡಿತರು ಆನಂದತೀರ್ಥರು ಹೇಳುತ್ತಿರುವ ರೀತಿಯಲ್ಲಿ ಅರ್ಥವನ್ನು ಮನಸ್ಸಿನಲ್ಲಿ ಹಿಡಿದಿಟ್ಟುಕೊಳ್ಳಲು ಆಗದೇ ತುಂಬಿದ ಸಭೆಯಲ್ಲಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ತಮ್ಮ ಸೋಲನ್ನು ಒಪ್ಪಿಕೊಂಡರು.

ವಿಷ್ಣುಸಹಸ್ರನಾಮದ ಮಹಿಮೆಯನ್ನು ಎಷ್ಟು ಹೇಳಿದರೂ ಅಲ್ಪ. ಇದು ಮೋಕ್ಷಪ್ರದವಾದುದಲ್ಲದೇ ರೋಗ ನಿರೋಧಕ ಮಂತ್ರವೂ ಆಗಿದೆಯೆಂದು ಚರಕ ಸಂಹಿತಾದಲ್ಲಿ ಹೇಳಿದೆ.

**ವಿಷ್ಣುಂ ಸಹಸ್ರಮೂರ್ಧಾನಂ ಚರಾಚರ ಪತಿಂ ವಿಭುಮ್।**
**ಸ್ತುವನ್ನಾಮ ಸಹಸ್ರೇಣ ಜ್ವರಾನ್ಸರ್ವಾನ್ವ್ಯ ಪೋಹತಿ॥**

ಮೇಹರೋಗದ ಚಿಕಿತ್ಸೆಗೆ ಪುರುಷಸೂಕ್ತದೊಡನೆ ವಿಷ್ಣುಸಹಸ್ರನಾಮ ಜಪವನ್ನು ಮಾಡುವುದು ಸೂಕ್ತವೆಂದು ಹೇಳಿದೆ. ಇದಲ್ಲದೇ ಇದು ಕ್ಷಯ ರೋಗದ ನಿವಾರಣೆ ಹಾಗೂ ಗ್ರಹಚಿಕಿತ್ಸೆಗೂ ಪರಿಹಾರವೆಂದು ಹೇಳಿದೆ.

**ಜಪ್ಯಂ ಪುರುಷಸೂಕ್ತಮ್। ತಥೈವ ಭಗವನ್ನಾಮ ಸಹಸ್ರಂ।**
**ಭಾರತೋದಿಕಮ್। ಆಸತ್ಮತಂ ಮರತ್ಸೂಕ್ತಂ ವಿಷ್ಣೋರ್ನಾಮ ಸಹಸ್ರಕಮ್॥**

ಇಂತಹ ಪರಮೋನ್ನತವಾದ ಶ್ರೀವಿಷ್ಣುಸಹಸ್ರನಾಮ ಸ್ತೋತ್ರಕ್ಕೆ ಅರ್ಥವನ್ನು ಬರೆದ ಶ್ರೀಸತ್ಯಸಂಧರು ದ್ವೈತ ವೇದಾಂತ ಸಂಸ್ಥಾಪಕರಾದ ಶ್ರೀಮನ್ಮಧ್ವಾಚಾರ್ಯರ ಮೂಲಮಠವಾದ ಶ್ರೀಮದುತ್ತರಾದಿ ಪೀಠಾಧಿಪತಿಗಳ ಪರಂಪರೆಯಲ್ಲಿ 26ನೇಯವರು. ಇವರು ಪ್ರಾತಃಸ್ಮರಣೀಯರು, ಪ್ರಕಾಂಡ ಪಂಡಿತರು, ತಪೋನಿಧಿಗಳು, ಭಕ್ತಾಭೀಷ್ಟ ಪ್ರದಾಯಕರು. ಶ್ರೀಸತ್ಯಸಂಧರು ಪೂರ್ವಜನ್ಮದಲ್ಲಿ ಮಾಡಿದ ಭಗವತ್ಪ್ರಾರ್ಥನೆಯಿಂದಲೇ ಶ್ರೀಮೂಲ ರಾಮದೇವರ ಪೂಜೆ ಮಾಡುವ ಸುಯೋಗವನ್ನು ಪಡೆದು ಹುಟ್ಟಿದರೆಂದು ಪ್ರತೀತಿ.

ಮಹಾಯೋಗಿಗಳು, ಜ್ಞಾನ ಶಿಖಾಮಣಿಗಳು ರಾಜಮಹಾರಾಜರಿಂದ ಸನ್ಮಾನಿತರಾದ ಶ್ರೀಸತ್ಯಭೋಧ ಶ್ರೀಪಾದಂಗಳವರ ಕರಕಮಲ ಸಂಜಾತರು ಶ್ರೀ ಸತ್ಯಸಂಧರು. ಶ್ರೀಸತ್ಯಭೋಧರಾದರೋ ಸಾಕ್ಷಾತ್ ಮಹಾರುದ್ರಾಂಶ ಸಂಭೂತರು. ವಿಷವನ್ನುಂಡು ಜೀರ್ಣಿಸಿಕೊಂಡ ಯತಿಶ್ರೇಷ್ಠರು. ಚಾತುರ್ಮಾಸ ಸಮಯದಲ್ಲಿ ಒಂದು ಸಾರಿ ಕೆಲವರು ದುರ್ಬುದ್ಧಿಯಿಂದ ಸವಣೂರಿನಲ್ಲಿ ಶ್ರೀಸತ್ಯಭೋಧರಿಗೆ ವಿಷವನ್ನು ಹಾಕಿದರು. ಚಿಕ್ಕ ನೈವೇದ್ಯದಲ್ಲಿ ಹಾಲಿನಲ್ಲಿ ವಿಷವನ್ನು ಕಲೆಸಿದರು. ಮಹಾಮಹಿಮರಾದ ಶ್ರೀಗಳವರು ಪ್ರತಿನಿತ್ಯದಂತೆ ಶ್ರೀಮೂಲರಾಮ್ಮ ದೇವರಿಗೆ ನೈವೇದ್ಯವನ್ನು ಅರ್ಪಿಸಿದರು. ಮಂಗಳಾರತಿ ಸಮಯದಲ್ಲಿ ಶ್ರೀಮೂಲರಾಮನ ವಿಗ್ರಹದ ಕಂಠ ಪ್ರದೇಶದಲ್ಲಿ ನೀಲಿ ಬಣ್ಣವು ಕಾಣಿಸಿಕೊಳ್ಳಲು ಶ್ರೀಗಳವರಿಗೆ ಅನುಮಾನವು ಬಂದು ಆ ಪದಾರ್ಥಗಳನ್ನು ಪರೀಕ್ಷಿಸಲು ವಿಷಬೆರೆಸಿರುವುದು ಗೊತ್ತಾಯಿತು. ಶ್ರೀಮೂಲ ರಾಮನಿಗೆ ಅರ್ಪಿಸಿದ್ದನ್ನೇ ತಾವು ಸಹ ಭುಂಜಿಸಲು ಉದ್ಯುಕ್ತರಾದಾಗ ಶಿಷ್ಯರೆಲ್ಲರೂ ಎಷ್ಟೇ ಬೇಡವೆಂದು ತಡೆದರೂ ಕೇಳದೆ ದೇವರಿಗೆ ಸಮರ್ಪಿಸಿದ ನೈವೇದ್ಯವನ್ನು ನಿರ್ಮಲ ಭಕ್ತಿ ಭಾವದಿಂದ ಶ್ರೀಮೂಲ ರಾಮನನ್ನು ತದೇಕಚಿತ್ತದಿಂದ ನೆನೆದು ಭುಂಜಿಸಿದರು. ದಯಾಹೃದಯನಾದ ಶ್ರೀಮೂಲರಾಮನ ಕರುಣೆಯಿಂದ ವಿಷವನ್ನು

ಜೀರ್ಣಿಸಿಕೊಂಡ ಮಹಾ ಮಹಿಮರು ಹಾಗೂ ಅಪರಾತ್ರಿಕಾಲದಲ್ಲಿ ಸೂರ್ಯನದರ್ಶನ ಮಾಡಿಸಿದಂಥವರು ಹಾಗೂ ಭಾಗೀರಥಿಯನ್ನು ಪ್ರತ್ಯಕ್ಷ ವನ್ನು ಮಾಡಿಸಿದಂಥ ಯೋಗಿವರ್ಯರು.

ಇಂಥಾ ಮಹಾಮಹಿಮರ ಕರಕಮಲ ಸಂಜಾತರು ಶ್ರೀಸತ್ಯಸಂಧರು. ಶ್ರೀಸತ್ಯಬೋಧತೀರ್ಥರು 1705ನೇ ಶಕೆ ಶೋಭನ ಸಂವತ್ಸರದ ಫಾಲ್ಗುಣ ವದ್ಯ ಪ್ರತಿಪದೆಯಂದು ಶ್ರೀಮೂಲರಾಮ ಪಾದಾರವಿಂದ ಸೇರಿದರು.

ಶ್ರೀಸತ್ಯಸಂಧರು ಹಾವೇರಿಯಲ್ಲಿ ಜನಿಸಿದರು. ಅವರ ತಂದೆಯವರ ಹೆಸರು ಶ್ರೀಮಧ್ವಾಚಾರ್ಯರು. ಅವರ ತಾಯಿಯವರ ಹೆಸರು ಭಾರತೀ ಬಾಯಿ. ಶ್ರೀಮಧ್ವಾಚಾರ್ಯರು ಅವರ ತಂದೆ ಶ್ರೀವೆಂಕಟಾಚಾರ್ಯರಂತೆ ಹರಿಭಕ್ತಿ ಪಾರಾಯಣರು, ಸಕಲಶಾಸ್ತ್ರ ಪಂಡಿತರಾಗಿದ್ದರು. ಅವರಿಗೆ ಅನುರೂಪಳಾದ ಪತ್ನಿ ಭಾರತೀಬಾಯಿಯವರು. ಇವರಿಗೆ ಸಂತಾನವಾಗಲು ವಿಳಂಬವಾಗಲು ವಿದ್ಯಾಸಂಪನ್ನಳೂ, ಸತ್ಕುಲಪ್ರಸೂತಳೂ, ಸೌಂದರ್ಯ ವತಿಯೂ ಆದ ಶ್ರೀಭಾರತೀಬಾಯಿಯು ತಮ್ಮ ಪತಿಯನ್ನು ಮನಃಪೂರ್ವಕ ವಾಗಿ ಸೇವೆಮಾಡಿ ದೇವರನ್ನು ಶ್ರದ್ಧಾಭಕ್ತಿಯಿಂದ ಪೂಜೆ ಮಾಡುತ್ತಿರಲು ಒಂದು ದಿನ ಶ್ರೀಮಧ್ವಾಚಾರ್ಯರಿಗೆ ಸ್ವಪ್ನದಲ್ಲಿ ಬ್ರಾಹ್ಮಣನೊಬ್ಬನು ಕಾಣಿಸಿ ಕೊಂಡು, ಮಕ್ಕಳಾಗಲಿಲ್ಲವೆಂದು ದಂಪತಿಗಳಾದ ನೀವು ಕೊರಗಬೇಡಿ, ನಿಮಗೆ ಉತ್ತಮೋತ್ತಮನಾದ ಪುತ್ರನು ಜನಿಸುತ್ತಾನೆ. ನೀವು ತುಂಗಾತೀರ ದಲ್ಲಿರುವ ಬಿದರಹಳ್ಳಿಗೆ ಹೋಗಿ ಅಶ್ವತ್ಥ ವೃಕ್ಷಾಂತರ್ಯಾಮಿಯಾದ ಶ್ರೀನಿವಾಸನನ್ನು ಸೇವೆಮಾಡಿ ಎಂದು ಹೇಳಿದಂತಾಯಿತು. ಅದರಂತೆ ಪುಣ್ಯ ಶಾಲಿಗಳಾದ ದಂಪತಿಗಳು ಬಿದರಹಳ್ಳಿಗೆ ಹೋಗಿ ಅಶ್ವತ್ಥವೃಕ್ಷಾಂತರ್ಯಾಮಿ ಯಾದ ಶ್ರೀನಿವಾಸನನ್ನು ತದೇಕ ಭಕ್ತಿಯಿಂದ ನಿಷ್ಠೆಯಲ್ಲಿ ಸೇವಿಸಿದರು. ಪರಮಾತ್ಮನ ಪ್ರೇರಣಾನುಸಾರ ಅಲ್ಲಿಂದ ಮಂತ್ರಾಲಯಕ್ಕೆ ತೆರಳಿ ಕಠಿಣತರ ವಾದ ಸೇವೆಯನ್ನು ಕೈಗೊಂಡರು. ಶ್ರೀರಾಘವೇಂದ್ರ ಸ್ವಾಮಿಗಳ ಅಂತರ್ಯಾಮಿ ಶ್ರೀರಾಮಚಂದ್ರನು ಇವರ ಕಠಿಣ ಉಪವಾಸಾದಿ ಸೇವೆಗಳಿಗೆ ಪ್ರಸನ್ನನಾಗಿ ಶ್ರೀರಾಘವೇಂದ್ರಸ್ವಾಮಿಗಳವರ ರೂಪದಲ್ಲಿ ದರ್ಶನವಿತ್ತನು. ಹಾಗೂ ಶ್ರೀರಾಘವೇಂದ್ರಸ್ವಾಮಿಗಳು ಅವರ ಗರ್ಭದಲ್ಲಿ ಜನ್ಮಿಸುವುದಾಗಿ ಅಭಯವಿತ್ತನು.

**ವೈರಾಗ್ಯ ಸಾಮ್ರಾಜ್ಯ ಮಹಾಧಿಪತ್ಯ**
**ವದಾನ್ಯತಾತಿ ಪ್ರತಿಭಾಪ್ರಭಾದ್ಯೈಃ**
**ವಿಭೂಷಿತಃ ಪಾಕವರೋ ಭವೇದಿ-**
**ತ್ಯಲಂರಸಾಲಸ್ಯ ಫಲಂದದೌಸಃ**

ಹುಟ್ಟುವ ಮಗುವು ವೈರಾಗ್ಯ ಚಕ್ರವರ್ತಿಯು, ದಾನಶೂರನೂ, ಪ್ರಸಿದ್ಧನು, ಕರುಣಾಮೂರ್ತಿಯು ಆಗುವನೆಂದು ಹೇಳಿ ಫಲಮಂತ್ರಾಕ್ಷತೆಗಳನ್ನು ಕೊಟ್ಟನು. ಸುಮೂಹೂರ್ತದಲ್ಲಿ ಶ್ರೀಮತಿ ಭಾರತೀಬಾಯಿಯವರು ಗರ್ಭವತಿಯಾದರು. ಶ್ರೀಮತಿ ಭಾರತೀಬಾಯಿಯವರಿಗೆ ಆದ ಬಯಕೆಗಳು ಆಕೆ ಗರ್ಭದಲ್ಲಿ ಹುಟ್ಟಿ ಜನಿಸುವ ಮಹಾಮಹಿಮನ ಸದ್ಗುಣಗಳನ್ನು ಪ್ರತಿ ಬಿಂಬಿಸುತ್ತಿತ್ತು. ಅದಾವುದೆಂದರೆ, ಭಾಗವತ, ಭಾರತ, ರಾಮಾಯಣ ಶ್ರವಣಾ ಪೇಕ್ಷೆ, ಶ್ರೀಸೀತಾರಾಮರಿಗೆ ಅರ್ಪಿಸಿದ ನೈವೇದ್ಯ ಭಕ್ಷಣೆ, ಸದ್ಬ್ರಾಹ್ಮಣರಿಗೆ ದಾನ ಮಾಡುವ ಆಸೆ ಇತ್ಯಾದಿ. ಒಳ್ಳೆಯ ಮುಹೂರ್ತದಲ್ಲಿ ಮುಂದೊಂದು ದಿನ ಮಗುವಿನ ಜನನವಾಯಿತು. ಶ್ರೀಮಧ್ವಾಚಾರ್ಯ ದಂಪತಿಗಳು ಶ್ರೀ ಸೀತಾ ಮನೋಭಿರಾಮನನ್ನು ಮನೋವಾಕ್ಕಾಯಗಳಿಂದ ಸೇವಿಸುತ್ತಿದ್ದುದರಿಂದ ಹಾಗೂ ಶ್ರೀರಾಮಚಂದ್ರಮೂರ್ತಿಯೇ ಇಷ್ಟದೈವನಾದ್ದರಿಂದ ರಘುಕುಲ ಶ್ರೇಷ್ಠನ ಹೆಸರಿಡಬೇಕೆಂದು ಆ ಮಗುವಿಗೆ ಶ್ರೀ ರಾಘವೇಂದ್ರ ಎಂದು ನಾಮಕರಣ ಮಾಡಿದರು. ಶ್ರೀರಾಘವೇಂದ್ರನಿಗೆ ಸತ್ಸಮಯದಲ್ಲಿ ಚೌಲ, ಉಪನಯನ, ವಿದ್ಯಾಭ್ಯಾಸವನ್ನು ಶ್ರೀಮಧ್ವಾಚಾರ್ಯರು ನೆರವೇರಿಸಿದರು. ವಯಸ್ಸಿಗೆ ಬರಲು, ವಿದ್ಯಾವಂತಳೂ, ವಿನಯಶೀಲಳೂ, ಸೌಂದರ್ಯ ವತಿಯಾದ ಕನ್ಯೆಯನ್ನು ತಂದು ವಿವಾಹಮಾಡಿದರು. ಇವರಿಗೆ ಒಬ್ಬ ಮಗ ಮತ್ತು ಒಬ್ಬ ಮಗಳು ಹುಟ್ಟಿದರು. ತದನಂತರ ಇವಗಿಗೆ ಪತ್ನಿ ವಿಯೋಗವಾಗಿರಬಹುದು.

ಶ್ರೀರಾಘವೇದ್ರಚಾರ್ಯರು ಒಮ್ಮೆ ಲೋಕವಿಖ್ಯಾತರಾದ ಶ್ರೀಸತ್ಯಬೋಧ ತೀರ್ಥರಿದ್ದ ಸವಣೂರಿಗೆ ಬಂದರು. ಅಲ್ಲಿ ಶ್ರೀಸತ್ಯಬೋಧತೀರ್ಥರು ಇವರನ್ನು ನೋಡಿ ಇವರ ವಿದ್ವತ್ತಿನ ಆಳವನ್ನು ತಿಳಿಯಲೋಸ್ಕರ ತಮ್ಮ ಕೈಯಲ್ಲಿದ್ದ ಶ್ರೀಸುಧಾ ಪುಸ್ತಕದ ಪತ್ರವನ್ನು ಇವರ ಕೈಗೆ ಕೊಟ್ಟು ಅದರಲ್ಲಿ

ಒಂದು ವಾಕ್ಯದ ಪೂರ್ವಾಪರವನ್ನು ತಿಳಿಹೇಳಬೇಕೆಂದು ಅಪ್ಪಣೆ ಮಾಡಿದರು. ಆಗ ಇವರು ಅದರ ವಾಕ್ಯಾರ್ಥ ಪರಿಷ್ಕರಿಸಿ ಹೇಳಲು ಶ್ರೀಪಾದಂಗಳವರಿಗೆ ಅತೀವ ಆನಂದ ಉಂಟಾಯಿತು. ಅಂದಿನಿಂದ ಶ್ರೀಗಳವರು ಶ್ರೀರಾಘವೇಂದ್ರಚಾರ್ಯರನ್ನು ತಮ್ಮಲ್ಲಿಯೇ ಇಟ್ಟುಕೊಂಡು ಶ್ರೀರಾಮಚಂದ್ರಾಚಾರ್ಯರೆಂದು ಕರೆಯಹತ್ತಿದರು. ಸ್ವಲ್ಪ ಸಮಯದಲ್ಲಿ ಪೂರ್ವಾಶ್ರಮದ ತಮ್ಮ ಮೊಮ್ಮಗಳು ಶ್ರೀಸೇತುನಾರಾಯಣಾಚಾರ್ಯರ ಮಗಳಿಗೆ ಸರಿಯಾದ ವರನೆಂದು ತಿಳಿದು ಶ್ರೀರಾಮಚಂದ್ರಾಚಾರ್ಯರಿಗೆ ತಮ್ಮ ಮೊಮ್ಮಗಳಾದ ಸುಕನ್ಯಾಬಾಯಿಯನ್ನು ವಿವಾಹ ಮಾಡಿಸಿದರು. ಶ್ರೀರಾಮಚಂದ್ರಾಚಾರ್ಯರಾದರೋ ತಮ್ಮ ವಿದ್ವತ್ತು ಹಾಗೂ ಪಾಂಡಿತ್ಯಗಳಿಂದ ಶ್ರೀಗಳವರಿಗೆ ಬಹುಪ್ರಿಯರಾಗಿದ್ದರು. ತದನಂತರ ಇವರ ವಿದ್ಯಾನೈಪುಣ್ಯತೆ ಹಾಗೂ ವಿನಯಶೀಲತೆಯನ್ನು ನೋಡಿ ಶ್ರೀಗಳವರು ತಮ್ಮ ನಂತರ ಮಹಾಸಂಸ್ಥಾನಕ್ಕೆ ಇವರೇ ಉತ್ತರಾಧಿಕಾರಿ ಯಾಗಲು ಸಮರ್ಥರೆಂದು ಮನದಟ್ಟು ಮಾಡಿಕೊಂಡರು.

ಶ್ರೀಸತ್ಯಭೋಧತೀರ್ಥರು ನಲವತ್ತು ವರ್ಷಗಳವರೆಗೆ ಸಂಸ್ಥಾನದ ಪೂಜೆಯನ್ನು ಗೈದು ತಮಗೆ ದೇಹಾಲಸ್ಯವುಂಟಾಗುವುದನ್ನರಿತು ಶ್ರೀರಾಮಚಂದ್ರಾಚಾರ್ಯರಿಗೆ ಆಶ್ರಮವನ್ನು ಕೊಟ್ಟು ಶ್ರೀಸತ್ಯಸಂಧರೆಂದು ಕರೆದರು. ಸಮಸ್ತ ಸಂಸ್ಥಾನವನ್ನು ವಹಿಸಿಕೊಡುವಾಗ ತಮ್ಮ ತಪೋಬಲದಿಂದ ಶ್ರೀಸತ್ಯಸಂಧರು ದೀರ್ಘಾಯುಗಳಲ್ಲವೆಂದು ಅವರಿಗೆ ಕಾಲ ಸಮೀಪಿಸುತ್ತಿರುವುದೆಂದು ತಿಳಿದು ಶ್ರೀಸತ್ಯಬೋಧರು ರಕ್ಷಾಸ್ತೋತ್ರದಿಂದ ಹನ್ನೆರಡು ಬೆಳ್ಳಿಯ ಬಟ್ಟಲುಗಳಲ್ಲಿ ತುಪ್ಪ ತುಂಬಿಸಿ ಕುಡಿಯುವಂತೆ ಹೇಳಿದರು. ಶ್ರೀಸತ್ಯಸಂಧರಿಗಾದರೋ ಹತ್ತು ಬಟ್ಟಲು ತುಪ್ಪ ಕುಡಿಯಲು ಆಯಿತು. ಶ್ರೀರಾಮನ ಚಿತ್ತಕ್ಕೆ ಹತ್ತು ವರ್ಷ ಆಯುಷ್ಯ ಕೊಡಲು ಬಂದಿದೆ ಎಂದು ತಿಳಿಸಿದರು. ಆದರೆ, ಶ್ರೀ ಮೂಲರಾಮನ ಪೂಜೆಯನ್ನು ಕೈಗೊಳ್ಳಲು ಮತ್ತೊಂದು ಜನ್ಮವೆತ್ತಿರುವಿರಿ ಎಂದು ಹೇಳಿ, ಶ್ರೀಸತ್ಯಬೋಧರು ಶ್ರೀಸತ್ಯಸಂಧರಿಗೆ ಪ್ರಣವೋಪದೇಶವನ್ನು ಮಾಡಿ ಶ್ರೀವೇದವ್ಯಾಸ ಸಂಪುಟವನ್ನು ಅವರ ಶಿರದ ಮೇಲಿಟ್ಟು ಮಹಾಸಂಸ್ಥಾನವನ್ನು ಒಪ್ಪಿಸಿದರು.

ಶ್ರೀಸತ್ಯಭೋಧರ ವೃಂದಾವನವನ್ನು ಸವಣೂರಿನಲ್ಲಿ ಕಟ್ಟಿಸಿ, ಆರಾಧನೆಯನ್ನು ವಿಜೃಂಭಣೆಯಿಂದ ಜರುಗಿಸಿದರು. ಶ್ರೀಸತ್ಯಭೋಧರ ಆರಾಧನೆ ಇವತ್ತಿಗೂ ಸವಣೂರಿನಲ್ಲಿ ಬಹು ಚೆನ್ನಾಗಿ ನಡೆಯುತ್ತದೆ.

ತಮ್ಮ ಗುರುಗಳ ಆರಾಧನೆಯನ್ನು ಮುಗಿಸಿಕೊಂಡು ಶ್ರೀಸತ್ಯಸಂಧರು ದೇಶಸಂಚಾರವನ್ನು ಕೈಗೊಂಡರು. ಸಂಚಾರ ಕ್ರಮದಲ್ಲಿ ವಾದಿ ಪರಾಜಯ, ಮಧ್ವಸಿದ್ಧಾಂತ, ತತ್ವೋಪದೇಶ ಹಾಗೂ ಮುದ್ರಾದಿಗಳನ್ನು ಶಿಷ್ಯರಿಗೆ ಅನುಗ್ರಹಿಸಿ ಶಿಷ್ಯರನ್ನು ಉದ್ಧರಿಸಿದರು.

ಶ್ರೀಸತ್ಯಸಂಧರು ಸಂಚಾರ ಕ್ರಮದಲ್ಲಿ ಬಾಗಲಕೋಟೆ, ಶೂರ್ಪಾಲಯ, ಸಾಂಗಲಿಯನ್ನು ಮೊದಲುಗೊಂಡು ಗಯಾವನ್ನು ಸಂದರ್ಶಿಸಿದರು. ಶ್ರೀಮೂಲರಾಮ ಶ್ರೀಸೀತಾರನ್ನು ಮಹಾವೈಭವದಿಂದ ಹೋದೆಡೆಯಲ್ಲೆಲ್ಲಾ ಪೂಜೆಮಾಡಿ ಭಕ್ತವೃಂದಕ್ಕೆ ನೇತ್ರಾನಂದವನ್ನು **'ನ ಭೂತೋ ನ ಭವಿಷ್ಯತಿ'** ಎಂಬುವಂತೆ ಮಾಡಿದರು. ಕೃಷ್ಣಾನದಿ ತೀರದಲ್ಲಿರುವ ಸಾಂಗಲಿಯಲ್ಲಿರುವ ಯತಿಕುಲೋತ್ತಮರಾದ ಶ್ರೀಸತ್ಯವ್ರತತೀರ್ಥರ ವೃಂದಾವನದ ಬಳಿ ಶ್ರೀರಾಮಚಂದ್ರನ ಪೂಜೆ ಹಾಗೂ ಶ್ರೀಮನ್ನ್ಯಾಯಸುಧಾ ಪಾಠ ಪ್ರವಚನವನ್ನು ಮಾಡಿದಾಗ **ಶ್ರೀ ಸತ್ಯವ್ರತರು** ಮೆಚ್ಚಿ ಶಿರಃಕಂಪನದಿಂದ ದೊಡ್ಡದಾದ ಕಲ್ಲಿನ ವೃಂದಾವನವು ಚಲಿಸುವಂತೆ ಮಾಡಿದರು. ಮಿರ್ಜಿಯ ಬಾಲರಾಜ ಅರಸನು ಇದನ್ನು ನೋಡಿ "ಏನಿದು ಆಶ್ಚರ್ಯ–ಶಿಲಾಮಯವಾದ ದೊಡ್ಡ ವೃಂದಾವನವು ಚಲಿಸುತ್ತಿದೆ. ಇದಕ್ಕೆ ಶ್ರೀಸತ್ಯಸಂಧರ ತಪಃಶಕ್ತಿಯೇ ಕಾರಣ" ವೆಂದು ಹೇಳಿ ಅವರನ್ನು ಭಕ್ತಿಯಿಂದ ಶ್ಲಾಘಿಸಿ ಶ್ರೀರಾಮನವಮಿ ಉತ್ಸವಕ್ಕೆ ಬಂದು ಶ್ರೀಮೂಲರಾಮ ದೇವರ ಪೂಜೆಯನ್ನು ಮಾಡಿ ತನ್ನ ಪಟ್ಟಣವನ್ನು ಪುನೀತಗೊಳಿಸಬೇಕೆಂದು ಪ್ರಾರ್ಥಿಸಿದನು.

**ಶ್ರೀಸತ್ಯಧರ್ಮತೀರ್ಥರು** ಈ ರೀತಿ ಸತ್ಯಸಂಧರ ತಪಃಶಕ್ತಿಯನ್ನು ವರ್ಣಿಸಿದ್ದಾರೆ;

**ಯಃ ಸತ್ಯಸುಸಂಧತೀರ್ಥ ವಿಹಿತಃ ಶ್ರೀಮೂಲರಾಮಾರ್ಚನಾ–**
**ಕಾಲೇದರ್ಶಯದಾತ್ಮಯೌಗಿಕ ಬಲಂ ವೃಂದಾವನಂ ಚಾಲಿಯನ್।**

ವ್ಯಾಕುರ್ವನ್ ನಿಪುಣಂ ಸುಧಾಶಯ ಚಯಂ ವೈದುಷ್ಯಮನ್ಯಾದೃಶಂ
ತತ್ಸತ್ಯವ್ರತತೀರ್ಥ ದಿವ್ಯಮಹಿಮಾ ಸೀಮಾಸಮುಜ್ಜೃಂಭತೇ॥

ಈ ಘಟನೆಯನ್ನು ಶ್ರೀಸತ್ಯಪರಾಕ್ರಮ ತೀರ್ಥರು ಕೆಳಕಂಡಂತೆ ಹೇಳಿದ್ದಾರೆ;

ಸತ್ಸಂಧತೀರ್ಥ ಮುನಿಭಿಃ ಕ್ರಿಯಮಾಣ ಮೂಲ-
ರಾಮಾರ್ಚನೇ ಪ್ರಮದತಃ ಶಿರಸೋನಿಶಾಂತಂ
ಅಂದೋಲನಾಕ್ ಸಪದಿಯಸ್ಯ ಚಚಾಲಭವ್ಯ
ವೃಂದಾವನಂ ತಮಿಹನೌಮಿ ಮಹಾನುಭಾವಂ

ಮರಾಠಿ ಭಾಷೆಯಲ್ಲಿ ಶ್ರೀಕೋನೇರಾತ್ಮಜರವರು ಬರೆದಿರುವ ಶ್ರೀಸತ್ಯ ಸಂಧ ವಿಜಯದಲ್ಲಿ ಇದನ್ನೇ ಈ ರೀತಿ ವರ್ಣಿಸಿದ್ದಾರೆ;

ಮದಸತ್ಯಸಂಧ ವಿದ್ಯಾಂಬುರಾಶೀ
ಪಾಠಸಾಂಗತಾಂ ಶಿಷ್ಯನಿಕರಾಸೀ
ತ್ಯಾಸಮಯೀಂತೋಷ ಸತ್ಯವ್ರತಾಸೀ
ಹೋತಾಂ ಶಿರಃ ಕಂಪಾನೀ ಕರಿಕಾಜಾಲಾ
ಕದಾತ್ಯೇಚೇಂ ವೃಂದಾವನ ಫಿರಲೇಂ

ಶ್ರೀಸತ್ಯಸಂಧರ ತಪಃಶಕ್ತಿಯನ್ನು ಎಷ್ಟು ವರ್ಣಿಸಿದರೂ ಅಲ್ಪ ಮತ್ತು ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳನ್ನು ನಿಗ್ರಹಿಸಿದವ ರೆಂದು ಹೆಸರನ್ನು ಪಡೆದವರು.

ಒಂದು ಸಾರ್ತಿ ಶ್ರೀಸತ್ಯಸಂಧರು ಗಯಾದ ಹತ್ತಿರ ನಿರ್ಜನ ಪ್ರದೇಶದಲ್ಲಿ ತಮ್ಮ ಶ್ರೀ ಮೂಲರಾಮದೇವರ ಪೂಜೆಗೆ ಹೂವುಗಳು ದೊರಕದಿರಲು ಏನು ಮಾಡುವುದೆಂದು ಅಂದುಕೊಳ್ಳುತ್ತಿರುವಾಗ ಒಬ್ಬ ಬ್ರಾಹ್ಮಣನು ಸಹಸ್ರ ಕಮಲ ವನ್ನು ತಂದುಕೊಟ್ಟನು. ಹಾಗೂ ನೋಡುತ್ತಿದ್ದಂತೆಯೇ ಅದೃಶ್ಯನಾದನು. ಶ್ರೀಗಳವರು ಕಾಶಿಯಾತ್ರೆಯನ್ನು ಮಾಡುವಾಗ ಮಾರ್ಗಮಧ್ಯದಲ್ಲಿ ಜಗನ್ನಾಥ ಕ್ಷೇತ್ರವನ್ನು ಸಂದರ್ಶಿಸಿದರು. ಜಗನ್ನಾಥಸ್ವಾಮಿಯ ಗರ್ಭಾಲಯದ ಬಾಗಿಲು ಹಾಕಿದ್ದು ಶ್ರೀಸತ್ಯಸಂಧರು ಅಲ್ಲಿದ್ದ ಪಂಡಾಗಳನ್ನು, ಹಾಕಿದ್ದ ಬೀಗಗಳನ್ನು

ತೆಗೆಯಲು ಹೇಳಿದಾಗ ಅವರುಗಳು ಇವರಿಂದ ದ್ರವ್ಯವನ್ನು ವಸೂಲು ಮಾಡುವ ಉದ್ದೇಶದಿಂದ ತೆಗೆಯದೆ ಹೋದರು. ಶ್ರೀಗಳವರು ದೇವಸ್ಥಾನ ವನ್ನು ಪ್ರದಕ್ಷಿಣೆ ಮಾಡಿ ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡುತ್ತಿದ್ದಂತೆಯೇ ಶ್ರೀಜಗನ್ನಾಥ ಸ್ವಾಮಿಯು ಇವರ ಭಕ್ತಿಗೊಲಿದು ಬಾಗಿಲಿಗೆ ಹಾಕಿದ್ದ ಬೀಗಗಳು ತಮ್ಮಷ್ಟಕ್ಕೆ ತಾವೇ ಕಳಚಿ ಬಿದ್ದವು. ಇದನ್ನು ನೋಡಿ ಶ್ರೀಗಳವರ ಪಾದಾರ ವಿಂದಗಳಲ್ಲಿ ಬಿದ್ದು ತಮ್ಮ ತಪ್ಪನ್ನು ಕ್ಷಮಿಸಿ ಕಾಪಾಡಬೇಕೆಂದು ಕೇಳಿ ಕೊಂಡರು. ಅಂತೆಯೇ ಸಂಚಾರ ಮಾಡುತ್ತಾ ಗಯಾ ಕ್ಷೇತ್ರಕ್ಕೆ ಬರಲು ಗಯಾ ವಾಡರುಗಳು ಸಹ ಶ್ರೀಗಳವರಿಂದ ಹೇರಳ ಕಾಣಿಕೆಯನ್ನು ಪಡೆಯುವ ಉದ್ದೇಶದಿಂದ ದೇವಸ್ಥಾನದ ಬಾಗಿಲನ್ನು ತೆರೆಯದಿರಲು ಸ್ವಾಮಿಗಳು ಶ್ರೀವಿಷ್ಣುಪಾದವಿರುವ ಮಂದಿರದ ಹೊರಗಡೆಯೇ ಪೂಜೆ ಮಾಡಲು ಆಗಿಂದಾಗಲೇ ದೇವಸ್ಥಾನದ ಬಾಗಿಲಿಗೆ ಹಾಕಿದ್ದ ಬೀಗಗಳು ಕಳಚಿಕೊಂಡು ಕೆಳಗೆ ಬೀಳಲು, ಗಯಾವಾಡರುಗಳು ತಮ್ಮ ತಪ್ಪಿಗೆ ಹೆದರಿ ಶ್ರೀಗಳವರಿಗೆ ಶರಣಾಗತರಾದರು. ಶ್ರೀಸತ್ಯಸಂಧರಿಂದ ಹೇರಳವಾದ ಕಾಣಿಕೆ ಯನ್ನು ಪಡೆಯುವುದಿರಲೀ, ತಾವೇ ಶ್ರೀಗಳವರಿಗೆ ಕಾಣಿಕೆಗಳನ್ನು ಇತ್ತು, ಬಹು ವಿಧವಾಗಿ ಸ್ತುತಿಸಿ, ಸತ್ಕರಿಸಿ, ಶ್ರೀಗಳವರಿಂದ ಮುದ್ರಾಧಾರಣೆ ಪಡೆದು ಶ್ರೀಮಠದ ಶಿಷ್ಯರಾಗಿ ಪುನೀತರಾದರು. ಈಗಲೂ ಗಯಾಕ್ಷೇತ್ರದಲ್ಲಿ ಶ್ರೀವಿಷ್ಣು ಪಾದಕ್ಕೆ ಶ್ರೀಉತ್ತರಾದಿಮಠದಿಂದ ಸರಿಯಾಗಿ ಬೆಳಿಗ್ಗೆ 12 ಘಂಟೆಗೆ ಪೂಜೆ ನೈವೇದ್ಯ ನಡೆಯುತ್ತದೆ. ಪೂಜಾ ನೈವೇದ್ಯವನ್ನು ನೋಡುವ ಸೌಭಾಗ್ಯ ಈ ಲೇಖಕನಿಗೆ ಶ್ರೀಸೀತಾರಾಮನ ದಯೆಯಿಂದ ದೊರೆಯಿತು. ಸಾಮಾನ್ಯವಾಗಿ ವಿಷ್ಣುಪಾದದ ಪೂಜೆಯ ಕಾಲದಲ್ಲಿ ಯಾರನ್ನು ಒಳಗೆ ಬಿಡುವುದಿಲ್ಲ. ಯಾವ ಜನ್ಮದ ಸುಕೃತ ಪುಣ್ಯವೋ ಈ ಭಾಗ್ಯ ಲೇಖಕನಿಗೆ ದೊರೆಯಿತು.

ಒಂದು ಐತಿಹ್ಯದ ಪ್ರಕಾರ ತ್ರೇತಾಯುಗದಲ್ಲಿ ಶ್ರೀರಾಮಚಂದ್ರಪ್ರಭುವು ಇಲ್ಲಿಯ ಬ್ರಾಹ್ಮಣರಾದ ಗಯಾವಾಡರುಗಳಿಗೆ ಎಷ್ಟೇ ಸಂಪತ್ತು ಧನವನ್ನು ದಾನಮಾಡಿದರೂ ತೃಪ್ತರಾಗದಿರಲು ಬಂಗಾರ, ಬೆಳ್ಳಿಯ ಗುಡ್ಡೆಗಳನ್ನೇ ದಾನ ಮಾಡಿದನು. ಹಾಗೂ ಅವರು ತೃಪ್ತರಾಗದಿರಲು, ಮತ್ತೂ ದಾನವನ್ನು ಬೇಡುತ್ತಿದ್ದರಿಂದ ಶ್ರೀರಾಮಚಂದ್ರನು "**ಅಸಂತುಷ್ಟಾಃ ದ್ವಿಜಾಃ ನಷ್ಟಾಃ**" ಎಂದು

ಶಾಪವಿತ್ತನು. ಅಂತಹ ಗಯಾವಾಡರು ಶ್ರೀಗಳವರಿಗೆ ಶರಣಾಗತರಾಗಿದ್ದು ಶ್ರೀಗಳವರ ಮಹಿಮಾದ್ಯೋತಕ್ಕವಾಗಿದೆ.

ಶ್ರೀಸತ್ಯಸಂಧರು ಗಯಾದಿಂದ ಕಾಶಿಗೆ ಹೋಗಿ ಅಲ್ಲಿ ಪೂಜಾದಿಗಳನ್ನು ಮಾಡಿ ಅಲ್ಲಿಯ ಜನಸ್ತೋಮಕ್ಕೆ ಹರ್ಷವನ್ನುಂಟು ಮಾಡಿದರು. ಗಂಗಾ ತೀರದಲ್ಲಿ ಯಥಾವಿಧಿಯಾಗಿ ಪೂಜಿಸಿ ಅತ್ಯಮೂಲ್ಯವಾದ ಆಭರಣಗಳನ್ನು ಹಾಗೂ ವಸ್ತ್ರಗಳನ್ನು ಭಾಗೀರಥಿ ದೇವಿಗೆ ಸಮರ್ಪಿಸಿ ಭಾಗೀರಥಿ ದೇವಿ ಯನ್ನು ಸ್ಮರಿಸಲು ಗಂಗಾದೇವಿಯೇ ನದಿಯೊಳಗಿನಿಂದ ತನ್ನ ಕೈಗಳನ್ನು ನೀಡಿ ಸ್ವಾಮಿಗಳಿಂದ ಅವುಗಳನ್ನು ಸ್ವತಃ ಸ್ವೀಕರಿಸಿದಳು. ಅಲ್ಲಿ ನೆರೆದಿದ್ದ ಸಮಸ್ತ ಜನರು ಸ್ವಾಮಿಗಳು ಅರ್ಪಿಸಿದ ಬಾಗಿನವನ್ನು ಸ್ವೀಕರಿಸಲು ನೀಡಿದ ಕಂಕಣ ಶೋಭಿತ ಗಂಗಾದೇವಿಯ ಕೈಗಳನ್ನು ನೋಡಿ ಭಕ್ತಿ ತುಂದಿಲರಾಗಿ ಧನ್ಯರಾದರು. ಕಾಶಿಯ ಪಂಡಿತರು ಈ ಮಹತ್ತರವಾದ ಸ್ವಾಮಿಗಳ ಮಹಿಮೆಯನ್ನು ನೋಡಿ ಶ್ರೀಸತ್ಯಸಂಧರಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಧನ್ಯರಾದರು. ಅವರಲ್ಲಿ ಒಬ್ಬರಾದ ಬಾಲಸನ್ಯಾಸಿಯು ವಾದ ಮಾಡಲು ಮುಂದೆ ಬಂದಾಗ ಶ್ರೀಗಳವರು ಅವರನ್ನು ಪರಾಜಯಗೊಳಿಸಿದರು.

ತಪಶ್ಚಕ್ರವರ್ತಿಗಳಾದ ಶ್ರೀಸತ್ಯಸಂಧರ ಇಂತಹ ಮಹಿಮೆಗಳು ಅನೇಕ. ಸ್ವಾಮಿಗಳು ಪಾಂಡುರಂಗ ಕ್ಷೇತ್ರವಾದ ಪಂಢರಾಪುರದಿಂದ ಕೊಲ್ಹಾಪುರಕ್ಕೆ ಬಂದರು. ಆಗ ಚಾತುರ್ಮಾಸ ಸಮಯ. ಅಲ್ಲಿ ಶ್ರೀಭವಾನಿಯ ದರ್ಶನಕ್ಕೆ ಭಕ್ತನೊಬ್ಬನು ಹೊರಟಿದ್ದನು. ದಾರಿಯಲ್ಲಿ ಅವನ ಕಣ್ಣುಗಳು ಕಾಣಿಸದಂತಾ ಗಲು ಶ್ರೀಸತ್ಯಸಂಧರಲ್ಲಿ ಬಂದು ತನ್ನ ಕಷ್ಟವನ್ನು ಅರಿಕೆ ಮಾಡಿ ಅಂಧತ್ವವನ್ನು ನಿವಾರಿಸಬೇಕೆಂದನು. ಆ ರಾತ್ರಿ ಆ ಭಕ್ತನ ಸ್ವಪ್ನದಲ್ಲಿ ಶುಭ್ರ ವಸ್ತ್ರಧಾರಣಿ ಯಾದ ಶ್ರೀಭವಾನಿಯು ಕಾಣಿಸಿಕೊಂಡು "ನಾನೂ ಸೇರಿದಂತೆ ಎಲ್ಲಾ ದೇವತೆಗಳು ಶ್ರೀಮೂಲಸೀತಾರಾಮರ ಸೇವೆ ಮಾಡುತ್ತಿದ್ದೇವೆ" ದೃಢ ಮನಸ್ಸಿನಿಂದ ಶ್ರೀಸತ್ಯಸಂಧರ ಸನ್ನಿಧಿಯಲ್ಲಿದ್ದು ಅವರಿತ್ತ ತೀರ್ಥವನ್ನು ಸೇವಿಸು. ನಿನಗೆ ಶುಭವಾಗುವುದು ಎಂದು ಹೇಳಿದಂತಾಯಿತು. ಶ್ರೀಸತ್ಯ ಸಂಧರಿಗೆ ಮರುದಿನ ಬೆಳಿಗ್ಗೆ ತನಗಾದ ಸ್ವಪ್ನವನ್ನು ತಿಳಿಸಿ ಅವರಿತ್ತ ಮಂತ್ರಾರ್ಘ್ಯ ಉದಕದಿಂದ ಪುನಃ ಕಣ್ಣನ್ನು ಪಡೆದು ಧನ್ಯನಾದನು.

# ಶ್ರೀ ಮೂಲರಾಮೋ ವಿಜಯತೇ

## ಶ್ರೀ ಹರಿಯಾಚಾರ್ಯರು




## ಶ್ರೀ ವೆಂಕಟಾಚಾರ್ಯರು




ಶ್ರೀ ಸ್ವಾಮಿರಾಯಾಚಾರ್ಯರು ಪುತ್ರ
ಗಂಗಾಬಾಯಿ (ಹೆಂಡತಿ)

ಶ್ರೀ ಕೃಷ್ಣಾಚಾರ್ಯರು (ಪುತ್ರ)

ಶ್ರೀ ಗುರುರಾಯಾಚಾರ್ಯರು
(ಶ್ರೀ ಸತ್ಯಪರಾಯಣ ತೀರ್ಥರು)
ಭಾಗೀರಥಿಬಾಯಿ (ಆಶ್ರಮಪೂರ್ವದ ಹೆಂಡತಿ)
ಶ್ರೀ ವೆಂಕಟಮಧ್ವಾಚಾರ್ಯರು (ಪುತ್ರ)
ಗಂಗಾಬಾಯಿ (ಹೆಂಡತಿ)




(ವಿವಿದೆಡೆಗಳಿಂದ ವಿಷಯವನ್ನು ಸಂಗ್ರಹಿಸಿದೆ ತಪ್ಪೇನಾದರೂ ನುಸುಳಿದ್ದರೆ ಕ್ಷಮೆಯಿರಲಿ)

ಮತ್ತೊಂದು ಮಹತ್ತರ ಘಟನೆಯೆಂದರೆ ಜಗದೊಡೆಯ ಶ್ರೀಪುರಂದರ ವಿಠಲ ದೇವರು ಶ್ರೀಸತ್ಯಸಂಧರಿಗೆ ಬ್ರಹ್ಮಚಾರಿರೂಪದಲ್ಲಿ ಕಾಣಿಸಿಕೊಂಡನು ಹಾಗೂ ಅವರಿಂದ ಮುದ್ರಾಧಾರಣೆ ಮಾಡಿಸಿಕೊಂಡನು. ಎಂತಹ ಮಹಿಮಾ ನ್ವಿತರಿವರು ಎಂದು ಈ ಘಟನೆ ಹೇಳುತ್ತದೆ ಹಾಗೂ ಅವರ ತಪಃ ಪ್ರಭಾವದ ಮೇಲೆ ಬೆಳಕು ಬೀರುತ್ತದೆ. ಭೂವೈಕುಂಠವೆಂದೇ ಪ್ರಸಿದ್ಧವಾದ ತಿರುಪತಿ ಯಲ್ಲಿ ಶ್ರೀನಿವಾಸನ ದರ್ಶಿಸಿ ಹಾಗೂ ಶ್ರೀಮುಷ್ಣದಲ್ಲಿ ಭೂ ವರಾಹ ದೇವರನ್ನು ಸಂದರ್ಶಿಸಿ, ರಾಮೇಶ್ವರಕ್ಕೆ ಹೊರಟಿದ್ದ ಅವರು ಚನ್ನಪಟ್ಟಣ ಎಂಬ ಊರಿನಲ್ಲಿ ಇಳಿದುಕೊಂಡಿದ್ದ ಸ್ಥಳದಲ್ಲಿ ಹತ್ತಿರದಲ್ಲಿದ್ದ ಭಾವಿಯ ನೀರು ಉಪ್ಪಿನದ್ದಾಗಿತ್ತು. ಸ್ಥಳೀಯರು ಆ ಭಾವಿಯ ನೀರನ್ನು ಪೂಜೆಗೆ ಉಪಯೋಗಿಸಬಾರದೆಂದು ಶ್ರೀಗಳವರಿಗೆ ಹೇಳಿದರು. ಶ್ರೀಗಳಾದರೋ ಶ್ರೀರಾಮನಿಗೆ ಆ ನೀರಿನಿಂದ ಅಭಿಷೇಕ ಮಾಡಲು, ಅಭಿಷೇಕೋದಕದ ಸಂಪರ್ಕದಿಂದ ಆ ಭಾವಿಯ ನೀರು ಸಿಹಿ ನೀರಾಯಿತು. ಇದರಿಂದ ಆ ಊರಿನ ಜನರಿಗೆ ಕುಡಿಯುವ ನೀರಿನ ಸಮಸ್ಯೆ ಪರಿಹರಿಸಿದರು. ಅಲ್ಲಿಯ ತುರುಷ್ಕ ಅಧಿಪತಿಯು ಈ ವಿಷಯವನ್ನು ಚಾರರಿಂದ ತಿಳಿದು ಸ್ವಯಂ ತಾನೇ ಬಂದು ಪರೀಕ್ಷಿಸಿ, ಶ್ರೀಸತ್ಯಸಂಧರನ್ನು ನಮಸ್ಕರಿಸಿ "ಸಿದ್ಧ **ಯೋಗಿವರ ಏಷ ಇತೀಶೋ ಬದ್ಧ ಭಕ್ತಿರ ಭವದ್ಗುರು ವರ್ಯೆ**" ಎಂದು ಹೇಳಿ ಭಕ್ತಿಭಾವಗಳಿಂದ ವಂದಿಸಿ ತನ್ನ ಕೃತಜ್ಞತೆ ಯನ್ನು ಸೂಚಿಸಿದನು. ಇದಲ್ಲದೆ ಅದೇ ಊರಿನಲ್ಲಿ ಅತ್ಯಂತ ಶ್ರೀಮಂತನು ಶ್ರೀ ಶಂಕರಾಚಾರ್ಯರ ಮತಾನುವರ್ತಿಯು ಶ್ರೀ ಸತ್ಯಸಂಧರ ಈ ಮಹಿಮೆ ಯನ್ನು ಕಂಡು ತನ್ನ ಗೃಹಕ್ಕೆ ಆಹ್ವಾನಿಸಿ ಶ್ರೀ **ಸತ್ಯಸಂಧರೇ ಸಾಕ್ಷಾತ್ತು ಶ್ರೀ ಶಂಕರರೆಂದು ಭಾವಿಸಿ ಶಿವಸಹಸ್ರನಾಮದಿಂದ ಸುವರ್ಣನಾಣ್ಯಗಳಿಂದ ಪಾದಪೂಜೆಯನ್ನು ಮಾಡಿ ಧನ್ಯರಾದನು.**

ಗೋದಾವರಿ, ಕೃಷ್ಣಾ, ವಿಶಾಖ, ಗಂಜಾಂ, ವಿಜಯನಗರ ಪ್ರಾಂತಗಳಲ್ಲಿ ಸಂಚಾರ ಮಾಡುವಾಗ ಅನೇಕ ಕಡೆಗಳಲ್ಲಿ ಸುಮಾರು 200 ಮುಖ್ಯಪ್ರಾಣ ದೇವರ ಪ್ರತಿಮೆಗಳನ್ನು ಸ್ಥಾಪಿಸಿದರಂತೆ. ಗೋದಾವರಿ ತೀರದಲ್ಲಿರುವ ರಾಜಮಂಡ್ರಿಯಲ್ಲಿ ಶ್ರೀ ಸತ್ಯಾಧೀಶತೀರ್ಥರ ಬೃಂದಾವನ ಸನ್ನಿಧಿಯಲ್ಲಿ

ಚಾಳುಕ್ಯಕಾಲದ ಶ್ರೀ ಲಕ್ಷ್ಮೀ ನರಸಿಂಹಸ್ವಾಮಿ ವಿಗ್ರಹವನ್ನು 1788 ನೇ ಇಸವಿಯಲ್ಲಿ ಸ್ಥಾಪಿಸಿದರು.

ಶ್ರೀ ಟೀಕಾಚಾರ್ಯರ ಸನ್ನಿಧಾನವಾದ ಮಳಖೇಡಕ್ಕೆ ಶ್ರೀ ಸತ್ಯಸಂಧರು ಪ್ರಯಾಣಮಾಡಿ ಅಲ್ಲಿ ಶ್ರೀ ಜಯತೀರ್ಥರನ್ನು ಭಕ್ತಿಯಿಂದ ಬಹುವಿಧವಾಗಿ ಸ್ತುತಿಸಿ ವಾದಿಗಳನ್ನು ಜಯಿಸಲು ಸಮರ್ಥತೆಯನ್ನು ಕೊಡಬೇಕೆಂದು ಪ್ರಾರ್ಥಿಸಿದರು. ಆಗ ಅವರಿಗೆ ತುರೀಯಾಶ್ರಮವನ್ನಿತ್ತ ಶ್ರೀ ಸತ್ಯಬೋಧರ ಸನ್ನಿಧಾನವುಂಟಾಗಲು ಶ್ರೀ ಜಯತೀರ್ಥರ ಬೃಂದಾವನದ ಉತ್ತರದಲ್ಲಿ ಸ್ವಪ್ನ ಸೂಚಿತರಾಗಿ, ಶ್ರೀ ಸತ್ಯಬೋಧರಿಗೋಸ್ಕರ, ತೀರ್ಥ, ಹಸ್ತೋದಕಗಳಾಗುವಂತೆ ಏರ್ಪಡಿಸಿದರು. ಶ್ರೀಸತ್ಯಸಂಧರ ಕಾಲದಿಂದಲೂ ಈಗಲೂ ನಡೆಯುತ್ತಿದೆ.

ಕೊಲ್ಹಾಪುರದ ಹತ್ತಿರ ಒಂದು ಸ್ಥಳದಲ್ಲಿ ಅತಿಮಾನುಷವಾದ ಕಮಲದ ಹೂವುಗಳನ್ನು ಶ್ರೀ ಮೂಲರಾಮ ದೇವರ ಪ್ರತಿಮೆಗೆ ಅರ್ಪಿಸಿ, ಶ್ರೀಸೀತಾದೇವಿಯರಿಗೆ ಅರ್ಪಿಸಲು ಹೂವು ಇಲ್ಲದಿರಲು ಶ್ರೀ ಸತ್ಯಸಂಧರು ಖಿನ್ನಮನಸ್ಕರಾಗಲು, ಶ್ರೀಮೂಲರಾಮದೇವರಿಗೆ ಅರ್ಪಿಸಿದ ಪುಷ್ಪವು ಶ್ರೀ ಸೀತಾದೇವಿಯ ಪ್ರತಿಮೆಯ ಮೇಲೆ ಬಿದ್ದಿದ್ದನ್ನು ನೋಡಿ ಸಂತೋಷಿಸಿದರು. ಅತಿಮಾನುಷ ಕಮಲ ಪುಷ್ಪವನ್ನು ಪಡೆದಿದ್ದುದು ಸ್ತುತಿಮಾಲಾ ವ್ಯಾಖ್ಯಾನದಲ್ಲಿದೆ.

ಶ್ರೀ ಗುರುವರ್ಯರು ತಿರುವಾದಿ ಮುಂತಾದ ಸ್ಥಳಗಳನ್ನು ಸಂದರ್ಶಿಸಿದಾಗ ತಂಜಾವೂರಿನ ರಾಜನಾದ ಅಮರಸಿಂಗನು ಬಹುವಿಧವಾಗಿ ಸತ್ಕರಿಸಿದನು. ಅವಲ್ಲದೇ ಮೂರು ದಿವಸ ರಾಜನ ಮುಖ್ಯಮಂತ್ರಿಯ ಗೃಹದಲ್ಲಿ ಶ್ರೀಮೂಲರಾಮ ದೇವರಪೂಜೆಯನ್ನು ಶ್ರೀ ಸತ್ಯಸಂಧರು ಬಹು ವಿಜೃಂಭಣೆಯಿಂದ ಮಾಡಿದರು. ಅದನ್ನು ನೋಡಿ ಅಲ್ಲಿಯ ಅಧಿಕಾರಿಗಳು ಶ್ರೀಗಳವರನ್ನು ಪ್ರಾರ್ಥಿಸಲು, ಅವರುಗಳ ಪ್ರಾರ್ಥನೆಯ ಮೇರೆಗೆ ಕೃಷ್ಣಸ್ವಾಮಿ ಮಹಲ್ ಎಂಬ ಅರಮನೆಯಲ್ಲಿಯೂ ಪೂಜೆ ಮಾಡಿದರು. ಶ್ರೀಗಳವರು ಸಂಚಾರತ್ವೇನ, ಶ್ರೀ ಸುಬ್ರಹ್ಮಣ್ಯವನ್ನು ಸಂದರ್ಶಿಸಿದಾಗ ಅಲ್ಲಿ ಅವರು ಶ್ರೀ

ಮೂಲರಾಮನ ಪೂಜೆ ಮಾಡುತ್ತಿರಲು ಘಟಸರ್ಪವೊಂದು ಪೂಜೆ ಮಾಡುತ್ತಿದ್ದ ಸ್ಥಳಕ್ಕೆ ಧಾವಿಸಿ ಒಂದು ಕ್ಷಣ ನಿಂತು ಮುಂದೆ ಸಾಗಿತು. ಶ್ರೀ ಶೇಷದೇವರೇ ಪೂಜಾಕಾಲದಲ್ಲಿ ಬಂದು ಶ್ರೀ ಮೂಲರಾಮನನ್ನು ಸಂದರ್ಶಿಸಿದರು.

ಶ್ರೀ ಸತ್ಯಸಂಧರ ಅಪಾರ ಮಹಿಮೆಯನ್ನು **"ನವರತ್ನ ಮಾಲಿಕಾ"** ಎನ್ನುವ ಸ್ತೋತ್ರಗ್ರಂಥದಲ್ಲಿ ಕೃಷ್ಣ ತೀರವಾಸಿಗಳೂ, ಕವಿಕುಲಾಗ್ರಣಿಗಳೂ ಆದ ಶ್ರೀ ಕೃಷ್ಣಾಚಾರ್ಯ, ಶ್ರೀಮತಿ ನರಸುಬಾಯಿಯವರ ಸಂಜಾತರಾದ ಶ್ರೀ **ಆನಂದ ತೀರ್ಥಾಚಾರ್ಯರು** ಒಂದೇ ಪದ್ಯದಲ್ಲಿ ಈ ರೀತಿ ವರ್ಣಿಸಿದ್ದಾರೆ.

**ದೃಷ್ಟಗಂಗಾ ಶಾಸಿತಂ ದ್ವಾರಕೀಲಂ–**
**ಉಷ್ಟಾ ಮುದ್ರಾ ಪಂಡರೀಶಸ್ಯದತ್ತಾ**
**ಕೃಷ್ಣಃ ಸ್ಪೃಷ್ಟಃ ಶೇಷದರ್ಶಿ ಲತಾವಾ**
**ನಷ್ಟೈಶ್ವರ್ಯಂ ಸತ್ಯಸಂಧಂ ನಮಾಮಿ**

ಶ್ರೀ ಸತ್ಯಸಂಧರು ರಾಮೇಶ್ವರದಲ್ಲಿ ಕಾಶಿಯಿಂದ ತಂದಿದ್ದ ಗಂಗೆಯಿಂದ ಶ್ರೀ ರಾಮಲಿಂಗೇಶ್ವರನ ಮೇಲೆ ಅಭಿಷೇಕವನ್ನು ಮಾಡಿದರು ಹಾಗೂ ಶ್ರೀ ಮೂಲರಾಮನ ಪೂಜೆಯನ್ನು ಮಾಡಿ ಸ್ಥಳೀಯರಿಂದ ವಂದಿತರಾದರು.

ಶ್ರೀಗಳವರನ್ನು ಕುರಿತು ಮರಾಠಿ ಭಾಷೆಯಲ್ಲಿ **ಕೋನೇರಾತ್ಮಜ** ಎಂಬುವರು ಬರೆದ 'ಶ್ರೀ ಸತ್ಯಸಂಧ ವಿಜಯ'ವನ್ನು 1951 ಇಸವಿಯಲ್ಲಿ ತಂಜಾವೂರಿನ ಸರಸ್ವತಿ ಗ್ರಂಥಮಾಲೆ ಪ್ರಕಟಿಸಿದೆ. ಇದು ಒಂದು ಸಾವಿರ ಓವಿಗಳ ಕಾವ್ಯವಾಗಿದೆ. ಅಂತೆಯೇ ಸಂಸ್ಕೃತದಲ್ಲಿ ಶ್ರೀ ಆನಂದ ತೀರ್ಥಾಚಾರ್ಯರು **"ಶ್ರೀ ಸತ್ಯಸಂಧ ವಿಜಯ"** ಎಂಬ ಕಾವ್ಯವನ್ನು ಬರೆದಿದ್ದಾರೆ. ಆದ್ದರಿಂದ ಶ್ರೀ ಸತ್ಯಸಂಧರು ಎಂಥಹ ಮಹಿಮಾನ್ವಿತರೆಂದು ಸ್ವಯಂ ವೇದ್ಯವಾಗಿದೆ. ಶ್ರೀ ಬಿ.ಎನ್.ಕೆ. ಶರ್ಮಾರವರು ತಮ್ಮ" History of the Dwaitha School of Vedanta" ಎಂಬ ಪುಸ್ತಕದಲ್ಲಿ 'Minor Commentators' ಅನ್ನುವ ಭಾಗದಲ್ಲಿ ಶ್ರೀ ಸತ್ಯಪ್ರಿಯರ ಬಗ್ಗೆ ಬರೆಯುವಾಗ ಶ್ರೀ ಸತ್ಯಸಂಧರ ಬಗ್ಗೆ ಈ ರೀತಿ ಹೇಳಿದ್ದಾರೆ.

"Sathyapriya's grand disciple Sathyasandha figures as the subject of a panegyric in Alankaras............The author, Krishna gives the definitions and illustrations of one hundred arthalankaras commemoratives of Satyasandha".

ನಿತ್ಯರಾಮೋಪಾಸಕರಾದ ಶ್ರೀಸತ್ಯಸಂಧರ ವಂಶಸ್ಥರೇ ಆದ ಶ್ರೀಸತ್ಯ ಪರಾಯಣತೀರ್ಥರು ಬಿಜಾಪುರದಲ್ಲಿ ಸ್ವಪ್ನಲಬ್ಧವಾದ ಶ್ರೀ ಸತ್ಯಸಂಧ ತೀರ್ಥರ ವೃಂದಾವನವನ್ನು ಪ್ರತಿಷ್ಠಾಪಿಸಿದ್ದಾರೆ. ಇವತ್ತಿಗೂ ಪೂಜಾದಿಗಳು ಸಾಂಗೋಪಾಂಗವಾಗಿ ನಡೆಯುತ್ತಿದೆ. ವೃಂದಾವನವು ಅಷ್ಟ ಕೋನಾಕೃತಿ ಯಾಗಿದ್ದು ಅಪೂರ್ವವಾಗಿದೆ.

ಶ್ರೀ ಸತ್ಯಸಂಧರು ರಾಮೇಶ್ವರವನ್ನು ಸಂದರ್ಶಿಸಿ ಉಡುಪಿಗೆ ಬಂದರು. ಆಗ ಅಲ್ಲಿ ಪರ್ಯಾಯ ಮಹೋತ್ಸವವು ನಡೆಯುತ್ತಿತ್ತು. ಶ್ರೀ ಸತ್ಯಸಂಧರನ್ನು ಕಾಣುತ್ತಲೇ ತಮಗೆ ಅವರು 12,000 ರೂಪಾಯಿಗಳನ್ನು ಕೊಡಬೇಕಾದ ಸಂಪ್ರದಾಯವನ್ನು ಅಲ್ಲಿ ಸೇರಿದ್ದ ಅಷ್ಟಮಠದ ಯತಿಗಳು ಸೂಚಿಸಿದರು. ಶ್ರೀ ಸತ್ಯಸಂಧರು ಅದನ್ನು ಕೊಡಲು ಒಪ್ಪಿದರು. ಪುರಪ್ರವೇಶ ಮಾಡುತ್ತಿದ್ದಂತೆಯೇ ಶ್ರೀ ಮೂಲರಾಮ ದೇವರ, ವೇದವ್ಯಾಸ ದೇವರ ಹಸಿಬೆಯನ್ನು ಒಂದು ರಥದಲ್ಲಿ ಇಟ್ಟು ತಾವು ನಡೆಯಹತ್ತಿದರು. ಇದು ಸಂಪ್ರದಾಯ ವಿರುದ್ಧವೆಂದು ಅಷ್ಟ ಮಠದ ಯತಿಗಳು ಆಕ್ಷೇಪಿಸಲು ಆಗ ಶ್ರೀ ಸತ್ಯಸಂಧರು ತಮ್ಮೊಡನೆ ವಾಕ್ಯಾರ್ಥಮಾಡಿ ಜಯಿಸಿದರೆ ದೇವರ ಹಸಿಬೆಯು ಕೆಳಗಿಳಿಯುವು ದೆಂದರು. ವಾದದಲ್ಲಿ ಶ್ರೀ ಸತ್ಯಸಂಧರನ್ನು ಗೆಲ್ಲದಾದಾಗ ಇವರ ವಾದ ಸರಣಿಯನ್ನು ನೋಡಿ ಅಲ್ಲಿದ್ದವರು ಇವರು **"ಸತ್ಯಸಂಧರೋ ಅಥವಾ ಶಾಸ್ತ್ರದಲ್ಲಿ ಜರಾಸಂಧರೋ"** ಎಂದರು. ಆ ಸ್ವಾಮಿಗಳಲ್ಲಿ ಒಬ್ಬರು ರಾತ್ರಿಯ ಒಂದು ಪ್ರಹರ ವಾದ ಮಾಡಿ ಕೊನೆಗೆ ಸಿಟ್ಟಿಗೆದ್ದು, ಶ್ರೀ ಗಳವರಿಗೆ ಶಾಪವನ್ನು ಕೊಡಲು ಉದ್ಯುಕ್ತರಾದರು. ಶ್ರೀ ಸತ್ಯಸಂಧರೋ ಅದನ್ನು ತಮ್ಮ ದಿವ್ಯದೃಷ್ಟಿ ಯಿಂದ ತಿಳಿದು ಶಾಂತಚಿತ್ತರಾಗಿ "ನನ್ನ ವೃಂದಾವನವಾಗುವುದಕ್ಕೆ ಇನ್ನು ಹದಿನೈದು ದಿನಗಳಿವೆ. ಆದರೆ ನೀವು ಇನ್ನು ಹದಿನೈದು ದಿನಗಳೊಳಗೆ ಇಹಲೋಕವನ್ನು ತ್ಯಜಿಸುತ್ತೀರಿ. ನಿಮ್ಮ ಸಾಧನೆಯನ್ನು ನೀವು ಮಾಡಿಕೊಳ್ಳಿರಿ" ಎಂದರು.

ತದನಂತರ ಶ್ರೀಗಳವರು ತಾವು ಒಪ್ಪಿದಂತೆ ಹನ್ನೆರಡು ಸಾವಿರ ರೂಪಾಯಿಗಳನ್ನು ಕೊಟ್ಟರು. ಎಲ್ಲಾ ಮಠದ ಯತಿಗಳಿಂದ ಸತ್ಕರಿಸಿಕೊಂಡು, ತಮ್ಮ ಅವಸಾನ ಸಮೀಪಿಸುತ್ತಿದೆಯೆಂದು ತಿಳಿದು ಅವಸರ ಅವಸರವಾಗಿ ತೀರ್ಥಹಳ್ಳಿಗೆ ಹೊರಟರು. ದಾರಿಯಲ್ಲಿ ಸೀತಾನದಿಯಲ್ಲಿ ಸ್ನಾನವನ್ನು ಮಾಡಿ ತಮ್ಮ ಪರಿವಾರದವರನ್ನು ಕರೆದು ತಮ್ಮ ಕಾಲ ಸಮೀಪಿಸುತ್ತಿದೆಯೆಂದು ತಾವಿನ್ನು ಧ್ಯಾನಾಸಕ್ತರಾಗುತ್ತೇವೆಂದು, ತಮ್ಮನ್ನು ಪಲ್ಲಕ್ಕಿಯಲ್ಲಿ ಮಹಿಷಿಗೆ ಕರೆದುಕೊಂಡು ಹೋಗುವುದೆಂದು ಹೇಳಿದರು. ಹಾಗೂ ತಾವು ಸಂಜ್ಞೆ ಮಾಡಿದ ತಕ್ಷಣವೇ ತಮ್ಮ ಪೂರ್ವಾಶ್ರಮದ ತಮ್ಮಂದಿರಾದ ಕೃಷ್ಣಾಚಾರ್ಯ ರನ್ನು ತಮ್ಮ ಮುಂದೆ ಕರೆದು ತನ್ನಿ ಎಂದರು. ಅವರ ಶಿಷ್ಯರು ಪಲ್ಲಕ್ಕಿಯನ್ನು ಎತ್ತಿಕೊಂಡು ನಡೆಯುತ್ತಿರಲು ದಾರಿಯಲ್ಲಿ ಮರಗಳು ಇಲ್ಲದಿರಲು ಬಿಸಿಲಿನ ಝಳ ಹಾಗೂ ತಾಪ ಹೆಚ್ಚಾಗಿರಲು ಶ್ರೀ ಗುರುವರ್ಯರು ದಂಡಕಾಂಡವನ್ನು ಅಭಿಮಂತ್ರಿಸಿ ಅದನ್ನು ಮುಂದೆ ಹಿಡಿದುಕೊಂಡು ನಡೆಯುವುದೆಂದು ಅಪ್ಪಣೆ ಮಾಡಿದರು. ಅದರಂತೆ ಹಿಡಿದು ನಡೆಯಲು ಪಲ್ಲಕ್ಕಿಯನ್ನು ಹಿಡಿದು ನಡೆಯುತ್ತಿದ್ದ ಶಿಷ್ಯರ ನೆತ್ತಿಯ ಮೇಲೆ ಸರಿಯಾಗಿ ಒಂದು ಮೋಡವು ನೆರಳಾಗಿ ಎರಡು ಹರಿದಾರಿಯಷ್ಟು ದೂರ ಸಾಗಿತು. ಶ್ರೀಗಳವರು ಆಗ ತಮ್ಮ ಎರಡೂ ಕೈಗಳನ್ನು ಮೇಲೆಕ್ಕೆ ಎತ್ತಿ ಸಂಜ್ಞೆ ಮಾಡಲು ಶಿಷ್ಯರು ಪಲ್ಲಕ್ಕಿಯನ್ನು ಇಳಿಸಿದರು. ಹಾಗೂ ಶ್ರೀ ಗಳವರನ್ನು ಚೈಲಾಜಿನ ಕುಶಾಸನದ ಮೇಲೆ ಆಸನ ಸಹಿತವಾಗಿ ಕೂಡಿಸಿದರು. ಅವರ ಅಪ್ಪಣೆಯಾನುಸಾರ ಶ್ರೀ ಕೃಷ್ಣಾಚಾರ್ಯ ರನ್ನು ಕರೆ ತಂದರು. ಶ್ರೀಗಳವರು ಶ್ರೀ ಕೃಷ್ಣಾಚಾರ್ಯರಿಗೆ ಅನುಗ್ರಹ ಪೂರ್ವಕವಾಗಿ ಪೂರ್ಣ ಕಟಾಕ್ಷದಿಂದ ಫಲ ಮಂತ್ರಾಕ್ಷತೆಯನ್ನು ಕೊಟ್ಟು ಆಶ್ರಮವನ್ನಿತ್ತು ಅವರಿಗೆ **ಶ್ರೀ ಸತ್ಯವರರೆಂದು** ನಾಮಕರಣ ಮಾಡಿದರು. ಮುಂದೆ ಮಾಡ ಬೇಕಾದ ವಿಧಿವಿಧಾನಗಳೆಲ್ಲವು ಮುಗಿದ ಮೇಲೆ ಶ್ರೀ ಸತ್ಯಸಂಧರು ಶ್ವಾಸ ಧಾರಣೆ ಮಾಡಲು ಅವರ ಶರೀರವು ನಾಲ್ಕಾರು ಜನ ಶಿಷ್ಯರು ಹಿಡಿದರೂ ಪುಟನೆಗೆದು ಒಂದು ಗೇಣು ಎತ್ತರದಲ್ಲಿ ನೇತಾಡಿತು. ಮುಂದೆ ಸ್ವಲ್ಪ ಹೊತ್ತಿನ ಮೇಲೆ ಬ್ರಹ್ಮರಂಧ್ರ ಸ್ಫೋಟ ಗೊಂಡು ದೊಡ್ಡ ಶಬ್ದವಾಯಿತು: ಶ್ರೀ ಗಳವರು ಆನಂದ ಸಂವತ್ಸರದ ಜೇಷ್ಠ ಶುದ್ಧ ಬಿದಿಗೆ ಶ್ರೀ ಮೂಲರಾಮನ ಪಾದವನ್ನು ಸೇರಿದರು. ಅವರ ಶಿಷ್ಯರು ಶ್ರೀಗಳವರ

ಶರೀರವನ್ನು ಹೊಸ ಬುಟ್ಟಿಯಲ್ಲಿಟ್ಟು ಅಭಿಷೇಕ ಪೂಜೆಗಳನ್ನು ಮಾಡಿ, ಮೂರನೇ ದಿನದ ಹೊತ್ತಿಗೆ ತುಂಗಾ ತೀರದಲ್ಲಿ ಮಹಿಷಿಗೆ ತಂದು ಅಲ್ಲಿ ಅವರ ವೃಂದಾವನವನ್ನು ಶ್ರೀ ಅಶ್ವತ್ಥನಾರಾಯಣ ದೇವರ ಸನ್ನಿಧಾನದಲ್ಲಿ ಕಟ್ಟಿದರು.

ಮಹಾಮಹಿಮರಾದ ಶ್ರೀ ಸತ್ಯಸಂಧತೀರ್ಥರ ವೃಂದಾವನವು ತುಂಗಾ ನದೀತೀರದಲ್ಲಿ ಪ್ರಶಾಂತ ವಾತಾವರಣದಲ್ಲಿ ಭಕ್ತಾಭೀಷ್ಟಪ್ರದಾಯಕವಾಗಿ ಮಹಿಷಿ ಕ್ಷೇತ್ರದಲ್ಲಿದೆ. ಶ್ರೀ ಮಹಿಷಿ ಕ್ಷೇತ್ರವು ಶಿವಮೊಗ್ಗೆಯಿಂದ ತೀರ್ಥಹಳ್ಳಿಗೆ ಹೋಗುವ ದಾರಿಯಲ್ಲಿ ಮಾಲೂರಿನಲ್ಲಿ ಇಳಿದು ಸುಮಾರು ಐದಾರು ಕಿಲೋ ಮೀಟರ್ ದೂರ ಸವೆಸಿದರೆ ಸಿಗುವುದು. ಹನುಮತ್ಪ್ರತಿಷ್ಠಿತ ಶ್ರೀ ಮದಶ್ವತ್ಥ ನಾರಾಯಣ ಸ್ವಾಮಿಯನ್ನು ಹೊಂದಿರುವ ಕ್ಷೇತ್ರವು "**ಭುವನೇ ಪಾವನ ಪಾವನಿಕಾಂ**" ಎನ್ನುವಂತೆ ಅತ್ಯಂತ್ರ ಪವಿತ್ರ ಕ್ಷೇತ್ರವಾಗಿದೆ. ಇದು ತ್ರೇತಾಯುಗದಿಂದಲೂ ಪ್ರಸಿದ್ಧಿಯನ್ನು ಹೊಂದಿದೆ. ಇಲ್ಲಿ ಶ್ರೀ ತುಂಗಾಭದ್ರಾ ನದಿಯು ಪಶ್ಚಿಮವಾಹಿನಿಯಾಗಿ ಹರಿಯುತ್ತದೆ. ಕಾವೇರಿ ನದಿಯು ಶ್ರೀರಂಗಪಟ್ಟಣದಲ್ಲಿ ಪಶ್ಚಿಮವಾಹಿನಿಯಾಗಿದ್ದರೆ ಶ್ರೀ ತುಂಗಾಭದ್ರಾ ನದಿಯು ಇಲ್ಲಿ ಪಶ್ಚಿಮ ವಾಹಿನಿಯಾಗಿದೆ. ಮಹಿಷಿ ಕ್ಷೇತ್ರವು ಶ್ರೀ ಸತ್ಯನಾಥತೀರ್ಥರ ಕಾಲದಿಂದಲೂ ಶ್ರೀಮನ್ನ್ಯಾಯಸುಧಾ ಮಂಡಲಿಯ ಕ್ಷೇತ್ರವೆಂದು ಪ್ರಸಿದ್ಧಿ ಯನ್ನು ಪಡೆದಿತ್ತು. ಅಂತಹ ಮಹಿಮಾ ಕ್ಷೇತ್ರದಲ್ಲಿ ಮಹಾಮಹಿಮರಾದ ಈಗಿನ ಶ್ರೀ ಶ್ರೀ ಸತ್ಯಾತ್ಮತೀರ್ಥರು ಒಂದು ಮಂಡಲಪರ್ಯಂತ ಕಾಷ್ಠ ಮೌನವ್ರತವನ್ನು ಆಚರಿಸಿ ನಿರಂತರ ಪಾಠಪ್ರವಚನಗಳನ್ನು ಮಾಡಿ ಶ್ರೀ ಸತ್ಯಸಂಧರ ಆರಾಧನಾ ಮಹೋತ್ಸವವನ್ನು ವಿಜೃಂಭಣೆಯಿಂದ ನೆರವೇರಿಸಿದ ಹೆಗ್ಗಳಿಕೆ ಇವರದು.

ಶ್ರೀ ಸತ್ಯನಾಥತೀರ್ಥರ ಶಿಷ್ಯರಾದ ಶ್ರೀ ಸತ್ಯಾಭಿನವತೀರ್ಥರು ಸಂಚಾರ ಮಾಡುತ್ತಾ ಸಂಸ್ಥಾನದೊಂದಿಗೆ ಬಂದು "**ಸದ್ವಂದ್ಯಪಿಪ್ಪಲತರೋ ವಿತರಾ ಖಿಲೇಷ್ಟಂ**" ಎಂದು ಸ್ತುತ್ಯನಾದ ಶ್ರೀ ಮದಶ್ವತ್ಥನಾರಾಯಣನ ದರ್ಶನವನ್ನು ಮಾಡಿ, ಸಾಲಿಗ್ರಾಮಸರ ಹಾಗೂ ಹೇಮಾಭರಣಗಳನ್ನು ಸಮರ್ಪಿಸಿ, ತಮ್ಮ ಗುರುಗಳಾದ ಶ್ರೀ ಸತ್ಯನಾಥತೀರ್ಥರ ಸುಂದರ ಪ್ರತಿಮೆಯನ್ನು

ಪ್ರತಿಷ್ಠ (ಶ್ರೀ **ಸತ್ಯನಾಥತೀರ್ಥರು 'ಅಭಿನವ ಚಂದ್ರಿಕಾ' 'ಅಭಿನವ ತಾಂಡವ ಗ್ರಂಥಗಳನ್ನು ರಚಿಸಿದ ಮಹನೀಯರು)** ಹಾಗೂ ಮಹಿಷಿ ಕ್ಷೇತ್ರಕ್ಕೆ "ಶ್ರೀ ಸತ್ಯನಾಥಪುರ" ಹೆಸರಿಸಿ, ಶ್ರೀ ಮದಾಚಾರ್ಯರ ಸಿದ್ಧಾಂತದ ಪಾಠ ಹಾಗೂ ಪ್ರವಚನಗಳನ್ನು ನಡೆಸುತ್ತಿದ್ದ ಪಂಡಿತೋತ್ತಮರಿಗೆ ಮನೆಗಳನ್ನು ಕಟ್ಟಿಸಿ ಕೊಟ್ಟರು. ಇವರುಗಳು ಬ್ರಹ್ಮ ವಿಚಾರಪರರೆಂದು ಪ್ರಸಿದ್ಧರಾಗಿದ್ದರು. ಅದಾದ ಸುಮಾರು ನೂರು ವರ್ಷಗಳ ಮೇಲೆ ಸಂಚಾರಾನ್ವಯ ಇಲ್ಲಿಗೆ ಶ್ರೀ ಸತ್ಯ ಸಂಧರು ಬಂದಾಗ ಇಲ್ಲಿಯ ಪ್ರಕೃತಿಯ ರಮಣೀಯತೆಯನ್ನು ಮತ್ತು ಪ್ರಶಾಂತತೆಯನ್ನು ನೋಡಿ ಮಾರುಹೋಗಿ ಅಲ್ಲದೇ ಪಶ್ಚಿಮವಾಹಿನಿಯಾಗಿ ಹರಿಯುವ ನದಿಯಿಂದ ಆಕರ್ಷಿತರಾಗಿ ಇಲ್ಲಿಯೇ ವೃಂದಾವನಸ್ಥರಾಗ ಬೇಕೆಂದು ನಿಶ್ಚಯಿಸಿ ಇಲ್ಲಿ ವೃಂದಾವನಸ್ಥರಾಗಿದ್ದಾರೆ. ಒಮ್ಮೆ ಶ್ರೀಗಳವರು ಧರ್ಮಸ್ಥಳಕ್ಕೆ ಹೋಗಿದ್ದಾಗ ಅಲ್ಲಿ ಒಬ್ಬ ಬ್ರಾಹ್ಮಣನು ಶ್ರೀಗಳನ್ನು ಕುರಿತು **"ಯತೀಂದ್ರ ವಾಸಃ ಕುತ್ರಃ"** (ಯತೀಂದ್ರರೇ ತಮ್ಮ ವಾಸ ಮಾಡುವ ಸ್ಥಳ ವಾವುದು) ಎಂದು ಕೇಳಿದನು. ಆಗ ಶ್ರೀಗಳವರು " **ಇತೋ ಮಹಿಷ್ಯಾಂದಿ ಷ್ಯಾವತ್ಸ್ಯಾಮಿ**" (ಇನ್ನು ಮುಂದೆ ಮಹಿಷಿಯಲ್ಲಿ ಆನಂದದಿಂದ ವಾಸಿಸುವೆವು) ಎಂದು ಹೇಳಿದರು. ಇದಲ್ಲದೇ ಈ ಅಭಿಪ್ರಾಯವನ್ನು ತಾವೇ ರಚಿಸಿಧ ಸ್ತುತಿಮಾಲಾ ಗ್ರಂಥದ ಒಂದು ಪದ್ಯದಲ್ಲಿ "**ಸುಕ್ಷೀರ ಸಮುದ್ರ ವಸರ್ತೀ ಕ್ರಿಯಾಕ್**" ಗಂಗಾದಿತೀರ್ಥಪಾದನಾದ ಶ್ರೀಹರಿವಾಯುವರಾಹ ರೂಪದಿಂದ ತನ್ನ ದಂಷ್ಟ್ರ ಪ್ರದೇಶದಿಂದ ಪ್ರವಹಿಸುವಂತೆ ಮಾಡಿದ್ದರಿಂದಲೇ ಸ್ವಾದೂದಕ ಸಲಿಲ ಸಂಕುಲ ಪ್ರವಾಹವುಳ್ಳ ತುಂಗಾ ತೀರದಲ್ಲಿರುವ ಮಹಿಷೀ ಕ್ಷೇತ್ರವನ್ನೇ ತಮ್ಮ ವಾಸಭೂಮಿಯನ್ನಾಗಿ ಶ್ರೀ ರಾಮಚಂದ್ರನು ಕಲ್ಪಿಸಲಿ ಎಂದು ಹೇಳಿದ್ದಾರೆ;

ಶ್ರೀ ಸತ್ಯಸಂಧತೀರ್ಥರು ಇವತ್ತಿಗೂ ವೃಂದಾವನಾಂತರ್ಗತರಾಗಿ ಶ್ರೀಸೀತಾ ಸಮೇತ ರಾಮದೇವರನ್ನು ಪೂಜಿಸುತ್ತಿರುವರು. ಹಾಗೂ ತಮ್ಮನ್ನು ಮೊರೆಹೊಕ್ಕ ಭಕ್ತರನ್ನು ಕೈಹಿಡಿದು ಕಾಪಾಡುತ್ತಿರುವರು. ಅವರ ಕಾಮನೆ ಗಳನ್ನು ಪೂರ್ಣಗೊಳಿಸುತ್ತಿರುವರು. ಶ್ರೀ ಸತ್ಯಸಂಧರ ವಂಶದವರು ನಾಲ್ಕು ಜನ ಶ್ರೀ ಮದುತ್ತರಾದಿಮಠದ ಸ್ವಾಮಿಗಳಾಗಿ ಶ್ರೀಮೂಲಸೀತಾದೇವಿ ಹಾಗೂ

ಶ್ರೀ ಮೂಲರಾಮ ದೇವರನ್ನು ಪೂಜೆಗೈದ ಹೆಗ್ಗಳಿಕೆಯಾಗಿದೆ. ಸಾಂಗಲಿಯಲ್ಲಿ ಶ್ರೀ ಸತ್ಯಸಂಧರು ಶ್ರೀ ಸತ್ಯವ್ರತರ ವೃಂದಾವನದ ಬಳಿ ಶ್ರೀ ಮೂಲರಾಮ ದೇವರ ಪೂಜೆ ಮತ್ತು ಶ್ರೀಮನ್ನ್ಯಾಯಸುಧಾ ಪ್ರವಚನವನ್ನು ಮಾಡಿದಾಗ "**ಪಾದ್ವರಾದ್ದಂತ ಸದ್ವ್ಯಾಖ್ಯಾಂ ಸ್ವವಂಶಿಯೇನ ಭಾಷಿತಾಂ । ಶ್ರುತ್ವಾ ಸತ್ಯವ್ರತಸ್ತೋಷಾತ್ ಶಿರಃ ಕಂಪಯತೇ ಮುಹುಃ।** ಎಂದಂತೆ ತಮ್ಮ ವಂಶದಲ್ಲಿಯೇ ಹುಟ್ಟಿದವರು ಹಾಗೂ ತಮ್ಮ ಪ್ರಪ್ರಶಿಷ್ಯರಾದ ಶ್ರೀ ಸತ್ಯಸಂಧ ತೀರ್ಥರ ವಾಕ್ ವೈಖರಿಯನ್ನು ಪುನಃ ಪುನಃ ಮೆಚ್ಚಿ ವೃಂದಾವನಾರ್ಗತ ಶ್ರೀಸತ್ಯವ್ರತರು ಶಿರಃಕಂಪನವನ್ನು ವೃಂದಾವನವು ಚಲಿಸುವೋಪಾದಿಯಲ್ಲಿ ಮಾಡಿದರು. ಶ್ರೀ ಸತ್ಯಸಂಧರ ತರುವಾಯ ಅವರ ವಂಶದಲ್ಲಿಯೇ ಬಂದ ವರು ಪ್ರಾತಃಸ್ಮರಣೀಯರಾದ ಶ್ರೀಸತ್ಯವರರು. ತದನಂತರ ಶ್ರೀಮದುತ್ತರಾದಿ ಮಠದ ಆರ್ಥಿಕ ಪರಿಸ್ಥಿತಿಯನ್ನು ಪುನಶ್ಚೇತನಗೊಳಿಸಿದ ನಿತ್ಯರಾಮೋ ಪಾಸಕರು, ಮಹಿಮಾನ್ವಿತರು, ತಪೋನಿಧಿಗಳು, ಭಕ್ತಾಭೀಷ್ಟ ಪ್ರದಾಯಕರೂ, ಸಕಲವೇದ ಪಂಡಿತೋತ್ತಮರು ಆದ ಶ್ರೀ ಸತ್ಯಪರಾಯಣತೀರ್ಥರು. ಶ್ರೀ ಸತ್ಯವರರ ಹಾಗೂ ಶ್ರೀ ಸತ್ಯಪರಾಯಣತೀರ್ಥರ ವೃಂದಾವನವು ಸಂತೇ ಬಿದನೂರಿನಲ್ಲಿದೆ. ಶ್ರೀ ಸತ್ಯಪರಾಯಣರು ಶ್ರೀಮದುತ್ತರಾದಿ ಮಠದ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಗೊಳಿಸಿದರೆ, ಶ್ರೀ ಸತ್ಯವ್ರತರ ಕಾಲದಿಂದ ಶ್ರೀ ಮದುತ್ತರಾದಿಮಠಾಧೀಶರಿಗೆಲ್ಲ "ಸತ್ಯ" ಎಂಬ ಪದವು ಹೆಸರಿನ ಮುಂದೆ ಉಪಯೋಗಕ್ಕೆ ಬಂದಿದೆ.

**ಶ್ರೀ ಸತ್ಯಸಂಧರು ಪ್ರಮುಖವಾಗಿ ರಚಿಸಿದ ಗ್ರಂಥಗಳೆಂದರೆ,**

1. **ಪುರುಷ ಸೂಕ್ತ ವ್ಯಾಖ್ಯಾನ**
2. **ಘರ್ಮ ಸೂಕ್ತ ವ್ಯಾಖ್ಯಾನ**
3. **ಕೃಷ್ಣ ಸ್ತುತಿ**
4. **ಶ್ರೀ ಮದ್ವಿಷ್ಣು ಸಹಸ್ರನಾಮ "ವಿವೃತ್ತಿ" ಅಥವಾ ಭಾಷ್ಯ**

ನಿತ್ಯದೇವತಾರ್ಚನೆಗೆ ಬೇಕಾಗಿರುವ ಪುರುಷ ಸೂಕ್ತ, ಘರ್ಮ ಸೂಕ್ತಗಳಿಗೆ ವ್ಯಾಖ್ಯಾನವನ್ನು ಬರೆದಿದ್ದಾರೆ. ವಿಷ್ಣುಸಹಸ್ರನಾಮ ವ್ಯಾಖ್ಯಾನದಲ್ಲಿ ಭಗವಂತನ

ನಾಮಗಳಿಂದ ಶ್ರೀ ಹರಿಯ ಅವತಾರ ಮಹಿಮೆಗಳನ್ನು ಹಾಗೂ ಅನೇಕ ಗುಣಗಳನ್ನು ಮತ್ತು ಪದಗಳನ್ನು ವಿಭಜಿಸಿ ಅವುಗಳ ಗೂಢಾರ್ಥವನ್ನು ತಿಳಿಯಹೇಳಿದ್ದಾರೆ. ಇವರಿಂದ ರಚಿತವಾದ ವಿಷ್ಣುಸ್ತುತಿಗೆ ವ್ಯಾಖ್ಯಾನ ಮಾಡಿದ ಶ್ರೀಸತ್ಯಪರಾಯಣರು ಇವರನ್ನು ಸಪ್ತರ್ಷಿಗಳಲ್ಲಿ ಒಬ್ಬರೆಂದು ಬಣ್ಣಿಸಿರುವರು.

ಶ್ರೀಸತ್ಯಸಂಧರು ಶ್ರೀ ಮೂಲರಾಮ ದೇವರ ಪೂಜೆ ಮಾಡುವುದಕ್ಕೆ ಅವರು ಪೂರ್ವ ಜನ್ಮದಲ್ಲಿ ಮಾಡಿದ ಭಗವದ್ಪ್ರಾರ್ಥನೆಯಿಂದ ಜನ್ಮ ಪಡೆದವರೆಂದು ಹಾಗೂ ಶ್ರೀ ರಾಘವೇಂದ್ರಸ್ವಾಮಿಗಳೇ ಹುಟ್ಟಿದರೆಂದು ಪ್ರತೀತಿ. ಶ್ರೀ ಸತ್ಯಸಂಧರ ಮೂಲ ವೃಂದಾವನಕ್ಕೆ ಇವತ್ತಿಗೂ ಶ್ರೀ ರಾಘವೇಂದ್ರ ಸ್ತೋತ್ರದಿಂದ ಅಭಿಷೇಕ ಮಾಡುವ ಸಂಪ್ರದಾಯವಿದೆ. ಅದಲ್ಲದೇ ಮತ್ತೊಂದು ನಿದರ್ಶನವೆಂದರೆ ಒಂದು ಸಾರ್ತಿ ಮಂತ್ರಾಲಯದಲ್ಲಿ ಒಬ್ಬ ಆಚಾರ್ಯರು ಮೂಲ ವೃಂದಾವನಕ್ಕೆ ಎದುರಾಗಿ ಕುಳಿತು **ಪರಿಮಳ ವ್ಯಾಖ್ಯಾನ** ದಿಂದ **ಶ್ರೀ ಸುಧಾ** ಗ್ರಂಥವನ್ನು ತಮ್ಮ ಶಿಷ್ಯರಿಗೆ ಪಾಠ ಮಾಡುತ್ತಿದ್ದಾಗ ಒಂದು ಕಡೆ ಸಂದೇಹ ಬಂದಿತು. ಆದರೆ ಸಂದೇಹ ನಿವೃತ್ತಿಯಾಗದೆ ಹಾಗೇ ಉಳಿಯಿತು. ಅಂದಿನ ರಾತ್ರಿ ಶ್ರೀ ರಾಘವೇಂದ್ರ ಸ್ವಾಮಿಗಳು ಆ ಆಚಾರ್ಯರ ಕನಸಿನಲ್ಲಿ ದರ್ಶನವಿತ್ತು ನಿಮಗೆ ಬಂದ ಸಂದೇಹವನ್ನು ನಿವೃತ್ತಿಮಾಡುವವರು ಇಲ್ಲೇ ಹತ್ತಿರದಲ್ಲಿ ಇದ್ದಾರೆ ಅವರನ್ನು ಕೇಳಿದರೆ ನಿಮಗೆ ಸಂದೇಹ ನಿವೃತ್ತಿಯಾಗುವುದೆಂದು ಹೇಳಿದಂತಾಯಿತು. ಮರು ದಿನ ಬೆಳಗ್ಗೆ ಸಂದೇಹ ನಿವೃತ್ತಿ ಮಾಡುವವರಾರು ಎಂದು ಅಲ್ಲಿ ವಿಚಾರಿಸಲಾಗಿ, ಅಲ್ಲೇ ಹತ್ತಿರದಲ್ಲಿ ಶ್ರೀ ಸತ್ಯಸಂಧರು ಸಂಚಾರರೀತ್ಯಾ ಬಂದಿದ್ದಾರೆಂದು ತಿಳಿಯಿತು. ಆಗ ಆಚಾರ್ಯರು ಶ್ರೀಗಳವರನ್ನು ಭೇಟಿ ಮಾಡಲು ಹೋದಾಗ ಶ್ರೀಗಳವರು ಇವರನ್ನು ನೋಡುತ್ತಲೇ **"ನೀವು ಸುಧಾ ಗ್ರಂಥ ಪಾಠ ಮಾಡುವ ಕಾಲದಲ್ಲಿ ಬಂದ ಸಂದೇಹವನ್ನು ನಿವೃತ್ತಿ ಮಾಡಿಕೊಳ್ಳಲು ಬಂದಿರುವಿರಲ್ಲವೇ?"** ಎಂದು ಕೇಳಿದರು. ಆಚಾರ್ಯರಿಗೆ ದಿಗ್ಭ್ರಮೆಯಾಯಿತು. ಯಾವ ಸಂದೇಹವನ್ನು ನಿವೃತ್ತಿ ಮಾಡಿಕೊಳ್ಳಲು ಆಚಾರ್ಯರು ಬಂದಿದ್ದರೋ ಅವರು ಕೇಳುವುದಕ್ಕೆ ಮುಂಚೆಯೇ ಸಂದೇಹವನ್ನು ಹೇಳಿ ಶ್ರೀಗಳವರು ಅದನ್ನು ನಿವಾರಣೆ ಮಾಡಿದರು.

ಶ್ರೀ ಸತ್ಯಸಂಧರ ವೃಂದಾವನ ಪ್ರದಕ್ಷಿಣೆಯಿಂದ ಎಲ್ಲ ಪವಿತ್ರ ನದಿಗಳ ಸ್ನಾನದ ಪುಣ್ಯಫಲವು ಲಭಿಸುವುದು. ಸಕಲ ಶಾಸ್ತ್ರ ಹಾಗೂ ಅರ್ಥಗಳು ಇವರ ನಾಮಸ್ಮರಣೆಯಿಂದ ದೊರಕುವುದು. ಸರ್ವದೋಷಗಳನ್ನು ನಿವಾರಿಸುವ ಮಹಾನುಭಾವರಿವರು. ದ್ವೈತ ಮತವೆಂಬ ಮಹಾಸಾಗರಕ್ಕೆ ರಾಕಾ ಶಶಾಂಕರು. ದೋಷಲೇಶರು. ಪರಮಾತ್ಮನನ್ನು ಸಾಕ್ಷಾತ್ಕರಿಸಿ ಕೊಂಡಂಥವರು. ಭೂತ, ಪ್ರೇತ, ಪಿಶಾಚಾದಿ ದುಷ್ಟಗ್ರಹಗಳನ್ನು ನಿಗ್ರಹ ಮಾಡುವಂತಹ ಮಹಾಮಹಿಮರು. ಸತ್ಸಂತಾನ, ಹರಿಭಕ್ತಿ, ಆರೋಗ್ಯ ಜ್ಞಾನ, ಐಶ್ವರ್ಯವನ್ನು ಕೊಡುವ ಕಾಮಧೇನುವಂತವಹವರು. ಸರ್ವರೋಗ, ಭಯನಿವಾರಕರು, ಇವರ ಪಾದಪದ್ಮಯುಗಗಳನ್ನು ನೆನಸಿಕೊಂಡು "**ಶ್ರೀ ಸತ್ಯಸಂಧ**" ಎಂದು ಯಾರು ಪರಮಪಾವನವಾದ ನಾಮವನ್ನು ನಿತ್ಯ ಪಠಿಸುವರೋ ಅಂತಹವರಿಗೆ ಅತುಲ್ಯೈಶ್ವರ್ಯವು ದೊರಕಿ ಅವರ ಇಷ್ಟಾರ್ಥ ಗಳು ಸಿದ್ಧಿಸುವುದರಲ್ಲಿ ಲವಲೇಶವು ಸಂಶಯವಿಲ್ಲ. ಶ್ರೀ ಸತ್ಯಸಂಧರು ಶ್ರೀ ಪ್ರಹ್ಲಾದರ ಅಂಶದವರು. ಅಂಥ ಮಹಾಮಹಿಮಾವಂತರಾದ ಶ್ರೀಸತ್ಯ ಸಂಧರನ್ನು ಸ್ಮರಿಸುವುದೇ ಒಂದು ಪುಣ್ಯ.

**ಶ್ರೀ ಸತ್ಯ ಪರಾಯಣಾಂತರ್ಗತ ಶ್ರೀ ಭಾರತೀರಮಣ ಮುಖ್ಯಪ್ರಾಣಾಂತರ್ಗತ**

**॥ ಶ್ರೀ ಸೀತಾರಾಮ ಚಂದ್ರಾರ್ಪಣಮಸ್ತು. ॥**

* * *

**ಮಹಿಷಿಯಲ್ಲಿ ಸೇವೆಗಳಿಗೆ ಸಂಪರ್ಕಿಸಿ :**

**Sri A.L.S. ಆಚಾರ್ಯ,**

**ಶ್ರೀ ಸತ್ಯಸಂಧ ಗುರು ಸನ್ನಿಧಿ, ಮಹಿಷಿ,**

**ದೂರವಾಣಿ (08181) 235059, ಮೊಬೈಲ್ : 9449896874**

॥ ಶ್ರೀ ರಾಮ ॥

# ಕೋನೇರಾತ್ಮಜ ವಿರಚಿತ "ಸತ್ಯಸಂಧವಿಜಯ"

ಮರಾಠಿ ಭಾಷೆಯಲ್ಲಿ **'ಸತ್ಯಸಂಧ ವಿಜಯ'** ವೆಂಬ ಕಾವ್ಯ ಗ್ರಂಥವನ್ನು ಕೋನೇರಾತ್ಮಜ ಎಂಬುವರು ಬರೆದಿದ್ದಾರೆ. ಇದು ಕನ್ನಡ ನಾಡಿನಲ್ಲಿ ಹುಟ್ಟಿ ತಮಿಳುನಾಡಿನಲ್ಲಿ ಹರಿದು ಎರಡು ರಾಜ್ಯಗಳಿಗೆ ಜೀವನದಿಯಾಗಿರುವ ಕಾವೇರಿನದಿ ತೀರದಲ್ಲಿರುವ ತಂಜಾವೂರಿನ ಸರಸ್ವತಿ ಗ್ರಂಥ ಭಂಡಾರದಲ್ಲಿದೆ. ಪುಸ್ತಕ ಮೇಲ್ಭಾಗದಲ್ಲಿ **'ಸತ್ಯಸಂಧ ವಿಜಯ'** ಎಂಬ ಶಿರೋನಾಮೆಯಿದೆ.

ಕೋನೇರಿ ಮನೆತನದವರು ಮೂಲತಃ ಗೋದಾವರಿ ತೀರದಿಂದ ಬಂದವರೆಂದು ತಿಳಿದು ಬರುತ್ತದೆ. ಮರಾಠಾ ದಫ್ತರದಿಂದ ತಿಳಿದು ಬರುವ ವಿಷಯವೇನೆಂದರೆ ಇವರುಗಳು ಪೇಶ್ವೆಗಳ ಅಧೀನ ಸರದಾರರಾಗಿದ್ದರೆಂದು ಮುಂದೆ, ಬಂಕಾಪುರಕ್ಕೆ ಬಂದು ನೆಲಸಿ ಹೈದರಾಲಿಯ ಕಾಲದಲ್ಲಿ ಹರಿಹರದಲ್ಲಿ ತುಂಗಾನದಿಯ ದಾಟುವವರ ಬಳಿ ಸುಂಕವನ್ನು ವಸೂಲಿ ಮಾಡುತ್ತಿದ್ದರಿಂದ ಇವರು ಸುಂಕದ ಕೋನೇರಿಯವರು ಎಂದು ಕರೆಯಲ್ಪಡುತ್ತಿದ್ದರಂತೆ. ಈಗಲೂ ಬಹಳಷ್ಟು ಜನ ಹರಿಹರ ಮತ್ತು ದಾವಣಗೆರೆಯಲ್ಲಿದ್ದಾರೆಂದು ತಿಳಿದು ಬರುತ್ತದೆ. ಅವರಲ್ಲಿ ಕೆಲವರು ಕರ್ನಾಟಕಕ್ಕೆ ವಲಸೆ ಬಂದರೆ ಮತ್ತೆ ಕೆಲವರು ತಂಜಾವೂರಿಗೆ ಹೋಗಿ ನೆಲಸಿರಬಹುದು. ತಂಜಾವೂರಿನ ಪ್ರಖ್ಯಾತ ಬೃಹದೇಶ್ವರ ದೇವಸ್ಥಾನದಲ್ಲಿ ಅಲ್ಲದೇ ಗ್ರಂಥಾಲಯದಲ್ಲಿ ಕೋನೇರಿ, ಕೋನೇರಾತ್ಮಜ, ಕೋನೇರಿ ತನಯ, ಕೋನೇರಿನಂದನ ಎಂಬ ಹೆಸರುಗಳು ಸಿಗುವುದೆಂದು ತಿಳಿದು ಬರುತ್ತದೆ. ಯರಗೋಳ ದಲ್ಲಿ ಶ್ರೀ ಜಯತೀರ್ಥರು ತಪೋನಿರತರಾಗಿದ್ದ ಗುಹೆಯ ಮುಂಭಾಗದಲ್ಲಿರುವ ಕಟ್ಟೆಗೆ ಕೋನೇರಿ ಆಚಾರ್ಯರಕಟ್ಟೆಯೆಂದು ಕರೆಯುವ ವಾಡಿಕೆಯಿದೆಯಂತೆ. 1880 ರಲ್ಲಿ ರಚಿತವಾಗಿರುವ **'ಶತಪಥ ಬ್ರಾಹ್ಮಣ'** ಎಂಬ ಕೃತಿಯಲ್ಲಿ ಕೋನೇರಿ ಆಚಾರ್ಯರಿಂದ ರಚಿತ ಎಂದಿದೆಯಂತೆ. ಅಲ್ಲದೇ, ಉಸ್ಮಾನಿಯ ವಿಶ್ವ ವಿದ್ಯಾಲಯದಲ್ಲಿರುವ ಗ್ರಂಥದಲ್ಲಿಯೂ ಕೋನೇರಿ ಆತ್ಮಜವೆಂಬ ಕಾವ್ಯ ಗ್ರಂಥವುಯಿದೆಯೆಂದು ತಿಳಿದುಬರುತ್ತದೆ.

ಶ್ರೀ ಸತ್ಯಸಂಧತೀರ್ಥರು ತಂಜಾವೂರಿಗೆ ರಾಜಾ ಅಮರಸಿಂಹನ ಆಹ್ವಾನದ ಮೇಲೆ ಬಂದಾಗ ಶ್ರೀಸತ್ಯಸಂಧ ವಿಜಯವನ್ನು ಕೋನೇರಿಸುತನು ಬರೆದಿರಬಹುದು. ಅದರಲ್ಲಿ ಈ ರೀತಿ ಬರೆದಿದ್ದಾನೆ.

**ಪರಿಧಾವಿ ಸಂವತ್ಸರೀತ್ರಯೋದಶಿ ಯದಾ। ಆಷಾಢೀ ಶುಕ್ಲ ಇಂದುವಾಸರೀಯತಿ ವರ್ಯಾತೇ ಮುದಾದೇಖಾವಯಾ ಭೂಪಯೇ। ಸಂಘೇ ಘೇವೂನಿಯ ಗಜರಥಃ ತದಾ। ಸಕಳಾಂಚಿಪುರವಣೂರ ಮನೋರಥ। ಅಂಬರಿಯಾವಾಜೀ ಬಹುತಾ। ಪಾತಕಾರ್ಯುಳತ ಭೂಪಯೇತಾ ಜಾಲಾ। ಬಾಲೇ ಭರ್ಜೀ ನಾನಾಪರಿ। ವಾದ್ಯಯ ಘೇವೂನಿಯಾ ಸಂಧ್ಯನದೀತಿರಿ। ಬಂಧು ಜನ ಅಮಾತ್ಯ ಸಪರಿವಾರೀಃ। ರಾಜಾಸತ್ವರೀಚೆ ಭಕ್ತಿ ಕಡೂನಿಯಾ।**

ಶ್ರೀಸತ್ಯಸಂಧ ವಿಜಯವನ್ನು ಕೋನೇರಿ ವಂಶದ ಕೋನೇರಾತ್ಮಜ ಬರೆದಿದ್ದಾರೆ. ಅದೇ ವಂಶದವರು ಕೋನೇರಿರಾವ್ ನಾಮಧೇಯರು, ನನ್ನ ಧರ್ಮಪತ್ನಿ ಶ್ರೀಮತಿ ಸುಮನಾ ಬದರೀನಾಥ್ (ಇಂದುಮತಿ) ಅವರ ಮಾತಾಮಹ **ಶ್ರೀ ಕೋನೇರಿರಾವ್‌ರವರು ಸ್ವರ್ಣ ಪದಕವನ್ನು ಪಡೆದಿದ್ದವರು.** ಶ್ರೀ ಸತ್ಯಸಂಧ ತೀರ್ಥರು ಆಶ್ರಮ ಪೂರ್ವದಲ್ಲಿ ಶ್ರೀ ಸತ್ಯಪರಾಯಣತೀರ್ಥರ ಪಿತಾಮಹರು. ಯೋಗಾಯೋಗವೆಂಬಂತೆ ಶ್ರೀ ಸತ್ಯಸಂಧ ವಿಜಯವನ್ನು ಬರೆದ ಕೋನೇರಿ ವಂಶಸ್ಥರ ಕನ್ಯಾವನ್ನು ಶ್ರೀ ಸತ್ಯಸಂಧರ ವಂಶಸ್ಥನಾದ ನಾನು ಮದುವೆಯಾಗಿರುವುದು ನನ್ನ ಕುಲಗುರುಗಳಾದ ಶ್ರೀ ಸತ್ಯಪರಾಯಣತೀರ್ಥರ ಅನುಗ್ರಹಾಶೀರ್ವಾದ, ಶ್ರೀರಾಮ ದೇವರ ದಯೆ.

(ಈ ಲೇಖನಕ್ಕೆ ಆಧಾರ, ಶ್ರೀ ಆದ್ಯರಾಮಾಚಾರ್ಯರ ಲೇಖನ **'ಶ್ರೀಸತ್ಯಸಂಧ ವಿಜಯ ಕೋನೇರಿ ಮನೆತನ'** ಶ್ರೀಸುಧಾದ ಆಗಸ್ಟ್ 1977ರ ಸಂಚಿಕೆ–ಪುಟ 25–27, ಅವರಿಗೆ ಋಣಿ)

# ಶ್ರೀ ಸತ್ಯಸಂಧಾಷ್ಟಕಂ

ಸತ್ಯಬೋಧಹಸ್ತ ಕಂಜಜಾತಮಂಬುಜೇಕ್ಷಣಂ
ಮಂದಹಾಸಕುಂದದಂತಸುಂದರೇಂದುಸನ್ಮುಖಂ
ಕಂಬುಕಂಧರಂ ರಮೇಶ ಶೇಷಪೂರಿತೋದರಂ
ಸತ್ಯಸಂಧನಾಮಧೇಯಸದ್ಗುರುಂ ಭಜೇಽನಿಶಮಂ

ರಾಮಚಂದ್ರ ದೇವದಿವ್ಯ ಪಾದಪದ್ಮ ಪೂಜನೇ
ವೇಗಿಪಂಚಶಾಖಿನಂ ಕವೀಶಕಲ್ಪ ಶಾಖಿನಂ
ವಂದನಪ್ರದಕ್ಷಿಣಾತಿದಕ್ಷಜಾನು ಮಂಡಲಂ
ಸತ್ಯಸಂಧನಾಮಧೇಯ ಸದ್ಗುರುಂ ಭಜೇಽನಿಶಂ

ಸರ್ವಲೋಕವಂದನೀಯಪಾದಕಂಜಗೋಯುಗಂ
ಪಂಚಬಾಣಮುಖ್ಯವೈರಿಭಂಜನಂ ನಿರಂಜನಂ
ಕುಂಜರಾರ್ವಪೂರ್ವರಾಜಮಾನ್ಯರಾಜವೈಭವಂ
ಸತ್ಯಸಂಧನಾಮಧೇಯಸದ್ಗುರುಂ ಭಜೇಽನಿಶಂ

ಪಂಡಿತೇಶಪುಂಡರೀಕಪಂಡ ಚಂಡದೀಧಿತಿಂ
ಜಾತರೂಪಹಾರಕುಂಡಲಾಂಗುಳೀಯದಾನತಃ
ದಾನಶೀಲಮಿತ್ರಪುತ್ರಮರ್ಕದರ್ಪವಾರಣಂ
ಸತ್ಯಸಂಧನಾಮಧೇಯಸದ್ಗುರುಂ ಭಜೇಽನಿಶಂ

ತೀರ್ಥರಾಜಮಜ್ಜನಂ ನಮಜ್ಜನಂ ಹೃದಬ್ಜಗ
ಧ್ಯಾನಮಾನಮೌನಸೇವನಾತಿಸಕ್ತಮಾನಸಂ
ಸರ್ವದಾನತತ್ಪರಂ ವಶೀಕೃತಾಮರೇಶ್ವರಂ
ಸತ್ಯಸಂಧನಾಮಧೇಯಸದ್ಗುರುಂ ಭಜೇಽನಿಶಂ

ಮಧ್ವವಂಶಸಿಂಧುರಾಜಪೂರ್ಣಚಂದ್ರಸನ್ನಿಭಂ
ಚಂದ್ರಿಕಾದಿಸತ್ಪ್ರಬಂಧಭಾವಬೋಧಭೂಷಿತಂ
ಮಾಯಿಭಿಕ್ಷುದಕ್ಷಬಾಲಶಿಕ್ಷಣಾತಿದಕ್ಷಿಣಂ
ಸತ್ಯಸಂಧನಾಮಧೇಯಸದ್ಗುರುಂ ಭಜೇಽನಿಶಂ

ಗಾಂಗನೀರಸತ್ತರಂಗಭಂಗದೇ ಯಟೇ ಶುಭೇ
ರಾಮಕೃಷ್ಣಪೂಜನಾದ್ಯ ಪೂರ್ವಕಾರ್ಯಶೇಖರಂ
ಸ್ವರ್ಧುನೀತ್ರಟಸ್ಥ ಮಂದಿರಪ್ರತಿಷ್ಠಿತೇಶ್ವರಂ
ಸತ್ಯಸಂಧನಾಮಧೇಯಸದ್ಗುರುಂ ಭಜೇಽನಿಶಂ

ವಿಷ್ಣುಪಾದಮುಖ್ಯಪಾದಪೂಜನಾದಿಕಾರ್ಯತಃ
ಸ್ವಾಶ್ರಿತಾರ್ಯಸಜ್ಜನೌಘಭಕ್ತಿಮುಕ್ತಿದಾಯಕಂ
ಪೂರ್ಣಬುದ್ಧಿವದ್ಗೃಹೀತಮಾನವೇಶವಿಗ್ರಹಂ
ಸತ್ಯಸಂಧಮಧೇಯಸದ್ಗುರುಂ ಭಜೇಽನಿಶಂ

॥ ಹರಿಃ ಓಂ ॥

ಶ್ರೀ ಆನಂದತೀರ್ಥಾಚಾರ್ಯ ವಿರಚಿತ

# ಶ್ರೀ ಸತ್ಯಸಂಧ ಗುರುಸ್ತೋತ್ರ ನವರತ್ನಹಾರಃ

ಸುಗುಣಭರಿತಗಾತ್ರಃ ಸರ್ವದುರ್ವಾದಿಜೈತ್ರಃ ।
ಸರಸಿಜಸಮನೇತ್ರಃ ಸಾಧಿತಬ್ರಮ್ಹಸೂತ್ರಃ ॥
ಸುಜನವನಜಮಿತ್ರಃ ಸತ್ಯಬೋಧಾರ್ಯಪುತ್ರಃ ।
ಸಜಯತಿಬುಧಮಿತ್ರಃ ಸತ್ಯಸಂಧಃ ಪವಿತ್ರಃ ॥1॥

ಶ್ರಿತಬುಧಜನದಕ್ಷಃ ಶ್ರೀಶಸೇವಾದಿದಕ್ಷಃ ।
ಸ್ವಮತ ವಿಜಿತಪಕ್ಷಃ ಸತ್ವಮುದ್ರಾದಿದಕ್ಷಃ ॥
ಕೃತಸುಜನಸುಶಿಕ್ಷಃ ಕಾಮಿನಾಂಕಲ್ಪವೃಕ್ಷಃ ।
ಸಜಯತಿ ಶುಭವೀಕ್ಷಃ ಸತ್ಯಸಂಧಾಖ್ಯಮೋಕ್ಷಃ ॥2॥

ಕ್ಷಿತಿಸುರಗಣಜುಷ್ಟಃ ಕ್ಷೀಣಪಾಪದ್ಯನಿಷ್ಟಃ ।
ಕ್ಷಪಿತಸುಜನಕಷ್ಟಃ ಕ್ಷೋಭಿತಾದ್ವೈತತುಷ್ಟಃ ॥
ಸ್ವಜನಭಜನತುಷ್ಟಃ ಸರ್ವಸಂಪದ್ವಿಶಿಷ್ಟಃ ।
ಸಜಯತಿ ಹರಿನಿಷ್ಟಃ ಸತ್ಯಸಂಧೋವರಿಷ್ಟಃ ॥3॥

ಸುಜನವಿಸುತಲೀಲಃ ಶೋಭನಾಚಾರಶೀಲಃ ।
ಸಮರಘುಪತಿಲೋಲಃ ಶುದ್ಧಕಾಷಾಯಚ್ಯೈಲಃ ॥
ಸ್ವಭವಜಲಧಿಕೂಲಃ ಸಾನುಕಂಪಾಲವಾಲಃ ।
ಸಜಯತಿ ಗುಣಶೀಲಃ ಸತ್ಯಸಂಧಾರ್ಯಪಾಲಃ ॥4॥

ಜಪಿತವಿಮಲವರ್ಣಃ ಸತ್ಕಥಾದತ್ತಕರ್ಣಃ ।
ಲಲಿತತೃಣಸುವರ್ಣತಾಪಸತ್ವಾದಿಪರ್ಣಃ ॥
ವಿತರಣಜಿತಕರ್ಣಃ ಶ್ರೀಶಸೇವಾಸುಪರ್ಣಃ ।
ಸಜಯತಿಗುಣಪೂರ್ಣಃ ಸತ್ಯಸಂಧೋವತೀರ್ಣಃ ॥5॥

ಸಕಲವಿಬುಧತೋಷಃ ಶಾಂತರಾಗಾದಿದೋಷಃ ।
ಶಮಲಹರಸುವೇಷಃ ಶಾಸ್ತ್ರಸೇವಾಭಿಲಾಷಃ ॥
ಶ್ರಿತನಿಜಜನತೋಷಃ ಶಬ್ದಶಾಸ್ತ್ರೇಪ್ಯಶೇಷಃ ।
ಸಜಯತಿಗುಣಭೂಷಃ ಸತ್ಯಸಂಧಾರ್ಯಏಷಃ ॥6॥

ಪ್ರಕೃತವಿಜಿತಸರ್ವಃ ಪಂಡಿತಾರ್ಯೇಷ್ವಸರ್ವಃ ।
ಪರಿಹೃತರಿಪುಗರ್ವಃ ಪಂಚನಾರಾಚಶರ್ವಃ ॥
ಪರಮಭಜಕಪೂರ್ವಃಪಾಪತೂಲೌವ್ಯಜೋರ್ವಃ ।
ಸದಿಶತು ಸುಮತೀರ್ವಃ ಸತ್ಯಸಂಧೋಮಹಾರ್ಹಃ ॥7॥

ಸುತಪಸಿಬಹುಧೈರ್ಯಃ ಸ್ವಾರ್ಥವಾದ್ಯೈರವಾರ್ಯಃ ।
ಕಲುಷತಿಮಿರಸೂರ್ಯಃ ಕಲ್ಪಿತಾತ್ಮೀಯಕಾರ್ಯಃ ॥
ಪ್ರಥಿತವಿವಿಧಚರ್ಯಃ ಸತ್ಯಬೋಧಪ್ರಿಯಾರ್ಯಃ ।
ಸಜಯತಿಗುರುವರ್ಯಃ ಸತ್ಯಸಂಧೋಸ್ಮದಾರ್ಯಃ ॥8॥

ಪ್ರಕಟಿತಹರಿರೂಪಃ ಪ್ರಜ್ವಲಜ್ಞಾನದೀಪಃ ।
ಪ್ರಶಮಿತಭವತಾಪಃ ಪ್ರಜ್ವಲತ್ಪುಷ್ಪಚಾಪಃ ॥
ಸ್ವಜನಕಲುಷಲೋಪಃ ಸರ್ವಗೇಯಪ್ರತಾಪಃ ।
ಸಜಯತಿಯತಿರೂಪಃ ಸತ್ಯಸಂಧಾರ್ಯಭೂಪಃ ॥9॥

ಸತ್ಯಸಂಧಗುರುಪೂಗಗುಂಫಿತಾಂ ಯಸ್ಸುವರ್ಣ ನವರತ್ನ ಮಾಲಿಕಾಂ ॥
ಭಕ್ತಿಮಾನ್ವಹತಿನಿತ್ಯಮಭೀಷ್ಟಂ ತಸ್ಯ ಮಂಕ್ಷು ತನುತೆ ಹರಿರಿಷ್ಟಮ್ ॥10॥

ಸತ್ಯಸಂಧಗುರುಸ್ತೋತ್ರಂ ತದನುಗ್ರಹವಾಂಛಯಾ ॥
ಕೃತಮಾನಂದತೀರ್ಥೇನ ಯಲಗೂರುನಿವಾಸಿನಾ ॥11॥

**ಸಂಪೂರ್ಣಂ**

# ನಿತ್ಯರಾಮೋಪಾಸಕರು ಶ್ರೀ ಸತ್ಯಪರಾಯಣತೀರ್ಥರು

ಶ್ರೀರಾಮ

ಶ್ರೀರಾಮ ರಾಮ ರಾಮೇತಿ ರಮೇ ರಾಮೇ ಮನೋರಮೇ ।
ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ ॥

ಪಾರ್ವತಿಯು ಒಮ್ಮೆ ರುದ್ರದೇವರನ್ನು ಸ್ವಾಮಿ, ಜಗತ್ತಿನಲ್ಲಿ ಮಾನವನು ಶ್ರೀ ಮಹಾವಿಷ್ಣುವನ್ನು ಸುಲಭವಾಗಿ ಒಲಿಸಿಕೊಳ್ಳಬೇಕಾದರೆ ಏನು ಮಾಡಬೇಕೆಂದು ಪ್ರಶ್ನಿಸಲು ರುದ್ರದೇವರು ಅತಿ ಸುಲಭ ಮಾರ್ಗವೆಂದರೆ ಶ್ರೀರಾಮ ನಾಮವನ್ನು ಜಪಿಸುವುದು ಎಂದು ಹೇಳಿದರು.

ಶ್ರೀರಾಮನಾಮ ಮಹಿಮೆಯನ್ನು ರುದ್ರದೇವರು ಹೇಳುವಾಗ ಸಹಸ್ರ ನಾಮಗಳು ಒಂದು ನಾಮವಾಯಿತು. ಈ ರಾಮನಾಮವು ಸಂತೋಷ ಪ್ರದಾಯಕವೂ, ಸಕಲ ಭೋಗ್ಯದಾಯಕವೂ, ಆಹ್ಲಾದಕರವೂ, ಮೋಕ್ಷಪ್ರದಾಯಿಕರವೂ ಆಗಿರುತ್ತದೆ. ಅಂತಹ ಮಹಿಮಾನ್ವಿತ ನಾಮವು ಕಲಿಯುಗದಲ್ಲಿ ಮತ್ತೊಂದಿಲ್ಲವೆಂದರು.

ಅಂತೆಯೇ, ಮೂಲರಾಮ, ದಿಗ್ವಿಜಯರಾಮ, ಸೀತಾ ವಿಗ್ರಹಗಳನ್ನು ಹೊಂದಿರುವ ಶ್ರೀ ಉತ್ತರಾದಿಮಠದಂತಹ ಮಠವು ಮತ್ತೊಂದಿಲ್ಲ. ಸರ್ವಜ್ಞರಾದ ಶ್ರೀ ಮಧ್ವಾಚಾರ್ಯರು ಶ್ರೀಮೂಲರಾಮರನ್ನು ಮತ್ತು ಶ್ರೀ ಸೀತಾರ ವಿಗ್ರಹವನ್ನು ಮಠಕ್ಕೆ ತಂದು ಸೇರಿಸಿದುದೇ ಒಂದು ರೋಚಕ ವಿಚಾರ. ಸರ್ವಜ್ಞರಾದ ಶ್ರೀಮದ್ ಆಚಾರ್ಯರು ಈ ಎರಡು ವಿಗ್ರಹಗಳ ಮಹತ್ವ ಮತ್ತು ಅವುಗಳ ಇರುವಿಕೆಯನ್ನು ತಿಳಿದಿದ್ದರು. ಮೂಲದೇವರಾದ ಶ್ರೀರಾಮ ಹಾಗೂ ಶ್ರೀ ಸೀತಾದೇವಿ ವಿಗ್ರಹಗಳನ್ನು ಬ್ರಹ್ಮದೇವರು ಪೂಜೆ ಮಾಡಿದ್ದುದು, ಅವರಿಗೆ ಗೊತ್ತಿದ್ದುದರಿಂದ ಅವರ ಶಿಷ್ಯರಲ್ಲಿ ಒಬ್ಬರಾದ ಶ್ರೀ ನರಹರಿತೀರ್ಥರನ್ನು ಕರೆದು ಕಳಿಂಗ ದೇಶದ ಗಜಪತಿ ಸಂಸ್ಥಾನದಿಂದ ತರಲು ಆಜ್ಞಾಪಿಸಿದರು. ಅದರಂತೇ ನರಹರಿತೀರ್ಥರು ಈ ಎರಡು ವಿಗ್ರಹಗಳನ್ನು ಶ್ರೀಮದಾಚಾರ್ಯರಿಗೆ ಕಾರ್ತೀಕ ಶುಕ್ಲ ಪಕ್ಷ ದ್ವಾದಶಿ ಸಾಯಂಕಾಲ ತಂದೊಪ್ಪಿಸಿದರು. ಶ್ರೀರಾಮ ಮತ್ತು ಸೀತಾದೇವಿಯವರ

ದಿವ್ಯ ಮಂಗಳ ಮೂರ್ತಿಗಳ ಸೌಂದರ್ಯವನ್ನು ಮಾತುಗಳಿಂದ ಅಗಲೀ ಅಕ್ಷರಗಳಿಂದಾಗಲೀ ವರ್ಣಿಸಲು ಅಸಾಧ್ಯ.

ಒಂದು ಸಂಪ್ರದಾಯದಂತೆ ಈ ವಿಗ್ರಹಗಳನ್ನು ವಿಶ್ವಕರ್ಮ ಮಾಡಿದ ನೆಂದು ಅವನ್ನು ಶ್ರೀ ಹಂಸನಾಮಕ ಪರಮಾತ್ಮನು ಬ್ರಹ್ಮನಿಗೆ ಕೊಟ್ಟನೆಂದು, ಮತ್ತೊಂದು ಐತಿಹ್ಯದಂತೆ ಈ ಎರಡು ವಿಗ್ರಹಗಳು ಬ್ರಹ್ಮನ ಎರಡು ಅಂಗೈ ಗಳ ಮಧ್ಯದಲ್ಲಿ ಬ್ರಹ್ಮನು ದೇವರನ್ನು ಪೂಜಿಸಬೇಕೆಂದಾಕ್ಷಣ ಬಿದ್ದವೆಂದು, ಅವೆರಡು **'ಸ್ವಯಂವ್ಯಕ್ತ'** ಪ್ರತಿಮೆಗಳು ಎಂದು ನಂಬಿಕೆ. ಆದ್ದರಿಂದ ಆ ಮೂರ್ತಿಗಳಲ್ಲಿ ಪರಮಾತ್ಮನನ್ನು ಆವಾಹಿಸಬೇಕಾಗಿಲ್ಲ. ಶ್ರೀ ಮೂಲರಾಮ ಹಾಗೂ ಶ್ರೀ ಸೀತಾ ವಿಗ್ರಹಗಳು ಈ ಕಾರಣದಿಂದ ಬಹಳ ಅಮೂಲ್ಯವಾದವು ಮತ್ತು ಪವಿತ್ರವಾದವು. ಶ್ರೀಮದಾಚಾರ್ಯರು ಊಟ ಮಾಡಿದ್ದರೂ ಸಹ ತತ್‌ಕ್ಷಣವೇ ಸ್ನಾನ ಮಾಡಿ, ದಿವ್ಯ ಮಂಗಳ ಸುಂದರ ಮೂರ್ತಿಗಳನ್ನು ಪೂಜೆ ಮಾಡಿದರು. ಪ್ರತಿವರ್ಷ ಕಾರ್ತೀಕ ಶುಕ್ಲಪಕ್ಷ ದ್ವಾದಶೀ ದಿನದಂದು ಸಾಯಂಕಾಲ ಇವತ್ತಿಗೂ ಸಹ ಶ್ರೀ ಉತ್ತರಾದಿ ಮಠದಲ್ಲಿ ಶ್ರೀ ಮೂಲರಾಮ ಹಾಗೂ ಶ್ರೀ ಸೀತಾದೇವಿ ವಿಗ್ರಹಗಳನ್ನು ಪೂಜಿಸುವ ಪರಿಪಾಠವಿದೆ.

ಇಂತಹ ಶ್ರೀಮೂಲರಾಮ ಹಾಗೂ ಶ್ರೀ ಸೀತಾದೇವಿ ವಿಗ್ರಹಗಳನ್ನು ಹೊಂದಿರುವ, ದ್ವೈತ ವೇದಾಂತ ಸಂಸ್ಥಾಪಕರಾದ ಶ್ರೀ ಮನ್ಮಧ್ವಾಚಾರ್ಯರ ಮೂಲ ಮಠವಾದ ಶ್ರೀ ಉತ್ತರಾದಿ ಮಠದಲ್ಲಿ ಶ್ರೀ ಸತ್ಯಪರಾಯಣ ತೀರ್ಥರು ಮೂವತ್ತನೆಯ ಯತಿಗಳು. ಮಹಾಯತಿಗಳಾದ ಇವರು ಪ್ರಾತಃ ಸ್ಮರಣೀಯರು.

ಶ್ರೀ ಸತ್ಯಪರಾಯಣರು ಪ್ರಹ್ಲಾದಂಶವೆಂದು ಪ್ರಸಿದ್ಧಿಯಾಗಿದ್ದಾರೆ. ಇವರಿಗೆ ಪೂರ್ವಾಶ್ರಮದಲ್ಲಿ ಹಾವೇರಿ ಗುರುರಾಯಾಚಾರ್ಯರೆಂದು ಹೆಸರು. ಇವರು ಶ್ರೀ ಸತ್ಯಸಂತುಷ್ಟತೀರ್ಥರಿಂದ ಅಶ್ರಮವನ್ನು ಪಡೆದು ಶ್ರೀ ಸತ್ಯಪರಾಯಣರೆಂದು ಹೆಸರಾದರು.

ಶ್ರೀ ಸತ್ಯಪರಾಯಣರು ಪೂರ್ವಾಶ್ರಮದಲ್ಲಿ ನಿತ್ಯ ರಾಮೋಪಾಸಕ ರಾಗಿದ್ದರು. ಅವರಿಗಿದ್ದ ಸತತ ಭಕ್ತಿ ಹಾಗೂ ಅಚಲ ನಂಬಿಕೆಯೇ ತರುವಾಯ ಅವರಿಗೆ ಶ್ರೀ ಬ್ರಹ್ಮದೇವರು ಹಾಗೂ ಶ್ರೀಮದಾನಂದ

ತೀರ್ಥರಿಂದ ಪೂಜಿತವಾದ ದಿವ್ಯ ಸುಂದರ ಮಂಗಳ ಸನ್ಮೋಹನ ಮೂರ್ತಿಗಳಾದ ಶ್ರೀ ಮೂಲರಾಮ ಶ್ರೀ ಸೀತಾರ ವಿಗ್ರಹಗಳನ್ನು ಪೂಜಿಸುವ ಸೌಭಾಗ್ಯ ದೊರಕಿಸಿ ಕೊಟ್ಟಿತೆಂದರೆ ಅತಿಶಯೋಕ್ತಿ ಏನು ಆಗಲಾರದು. ಮಹಾಮಹಿಮರಾದ ಶ್ರೀಸತ್ಯಪರಾಯಣರು ತಮ್ಮ ಆರಾಧ್ಯ ದೈವನಾದ ಶ್ರೀರಾಮನ "ರಾಮ" ಶಬ್ದಕ್ಕೆ 185 (ನೂರ ಎಂಭತ್ತೈದು) ರೀತಿಯಲ್ಲಿ ಆಶ್ಚರ್ಯಕರವಾದ ವ್ಯಾಖ್ಯಾನ ಮಾಡಿದ ಮಹಾ ಯತಿವರೇಣ್ಯರು, ನಿತ್ಯವಂದನೀಯರು.

ದ್ವೈತ ವೇದಾಂತ ಸಾಮ್ರಾಜ್ಯವನ್ನು ಶ್ರೀಮಂತಗೊಳಿಸಿದ ಶ್ರೀ ಸತ್ಯಪರಾಯಣತೀರ್ಥರು ಚತುಶಾಸ್ತ್ರ ಪ್ರಕಾಂಡ ಪಂಡಿತೋತ್ತಮರು, ಅಲ್ಲದೇ ತೇಜಸ್ವಿಗಳು, ಶಾಪಾನುಗ್ರಹಶಕ್ತರು, ಜ್ಞಾನದ ಖಣಿಗಳು, ವಿದ್ವನ್ಮಣಿಗಳು ಪಂಡಿತ ಪಾಮರರಿಂದ ವಂದಿತರು, ದಾನ ಚಿಂತಾಮಣಿಗಳು.

ಶ್ರೀ ಶ್ರೀಗಳವರು

ಅ) ಶ್ರೀರಾಮ ಶಬ್ದಾರ್ಥ ರತ್ನಮಾಲಾ

ಅ) ಶ್ರೀ ವಾಲ್ಮೀಕಿ ರಾಮಾಯಣ ಬಾಲಕಾಂಡ ವ್ಯಾಖ್ಯಾನ

ಇ) ಶ್ರೀ ವಾಮನ ಶಬ್ದಾರ್ಥ ನಕ್ಷತ್ರ ಮಾಲಿಕಾ

ಈ) ಬಿಲ್ವ ಮಂಗಲಃ ಸಾಧುಃ ವ್ಯಾಖ್ಯಾನ

ಉ) ಜಯಂತೀ ಕಲ್ಪವ್ಯಾಖ್ಯೆ

ಊ) ಶ್ರೀರಾಮ ಶಬ್ದಾರ್ಥ ಗರ್ಭಿತ ಅಣು ಭಾಷ್ಯಾ ವಿವರಣಂ

ಎಂಬ ಗ್ರಂಥಗಳನ್ನು ರಚಿಸಿ ದ್ವೈತ ವೇದಾಂತ ಸಾಮ್ರಾಜ್ಯಕ್ಕೆ ದೊಡ್ಡ ಕೊಡುಗೆಯನ್ನು ಕೊಟ್ಟಿದ್ದಾರೆ. ಶ್ರೀರಾಮ ಶಬ್ದಾರ್ಥ ರತ್ನಮಾಲಾ, ಶ್ರೀರಾಮ ಶಬ್ದಾರ್ಥ ಗರ್ಭಿತ ಅಣುಭಾಷಾವಿವರಣಂ ಹಾಗೂ ಶ್ರೀ ವಾಲ್ಮೀಕಿ ರಾಮಾಯಣ ಬಾಲಕಾಂಡ ವ್ಯಾಖ್ಯಾನ, ಶ್ರೀ ಸತ್ಯಪರಾಯಣತೀರ್ಥರ ನಿರಂತರ ರಾಮೋಪಾಸಕತೆಯ ನಿದರ್ಶನವಾಗಿದೆ.

ಶ್ರೀರಾಮ ಶಬ್ದಾರ್ಥ ರತ್ನಮಾಲಾದಲ್ಲಿ ಶ್ರೀರಾಮ ಶಬ್ದಾರ್ಥವನ್ನು 185 ರೀತಿಯಲ್ಲಿ ಆರು ಮಾಲೆಗಳಲ್ಲಿ ಅರ್ಥೈಸಿದ್ದಾರೆ

| | | | |
|---|---|---|---|
| 1. | ಅಷ್ಟೋತ್ತರ ರತ್ನಮಾಲೆ | – | 108 |
| 2. | ಶ್ರೀರಾಮ ಶಬ್ದಾರ್ಥ ರತ್ನಾಷ್ಟಕಂ | – | 8 |
| 3. | ಚತುರ್ವಿಂಶತಿ ರತ್ನಾನಿ | – | 24 |
| 4. | ಸಪ್ತ ರತ್ನಾನಿ | – | 7 |
| 5. | ಷಟ್ ರತ್ನಾನಿ | – | 6 |
| 6. | ದ್ವಾತ್ರಿಂಶದ್ರತ್ನ ಮಾಲಿಕಾ | – | 32 |

ಈ ಎಲ್ಲದರಲ್ಲೂ ಭಗವಂತನಿಗೆ ಅರ್ಪಿಸುವುದರ ಜೊತೆಗೆ ಫಲ ಶ್ರುತಿಯನ್ನು ಹೇಳಿದ್ದಾರೆ. ಭಾಗವತವು ಅವರಿಗೆ ಬಹಳ ಪ್ರಿಯವಾದುದರಿಂದ ಅಲ್ಲಿಯಂತೆಯೇ, ಇವರು ಸಹ ಎಲ್ಲಾ ಮಾಲೆಗಳಲ್ಲಿ ಫಲ ಶ್ರುತಿ ಹೇಳಿದ್ದಾರೆ.

ಶ್ರೀ ಸತ್ಯಪರಾಯಣರು, ವಿದ್ವನ್ಮಣಿಗಳಿಂದ, ವೇದ ಶಾಸ್ತ್ರ ಪಾರಂಗತರಿಂದ, ಪಂಡಿತೋತ್ತಮರಿಂದ ಪೂಜಿತರಾದರೂ ಅವರು ತಮ್ಮ ಶ್ರೀರಾಮ ಶಬ್ದಾರ್ಥ ರತ್ನಮಾಲಾದಲ್ಲಿ ತಮ್ಮನ್ನು

**"ಸತ್ಯಸಂತುಷ್ಟ ಶಿಷ್ಯೇಣ ಮಂದಭೋಧೇನ ಭಕ್ತಿತಃ"** ಎಂದು ಕರೆದುಕೊಂಡು ಇದ್ದಾರೆ. ಎಂಥಾ ಮಹಿಮರು, ಇವರು ತಮ್ಮನ್ನು, ತಾವು ಪರಮಾತ್ಮನಾದ ಶ್ರೀರಾಮನ ಚರಣಾರವಿಂದಗಳಲ್ಲಿ ಅರ್ಪಿಸಿಕೊಂಡು ಮಂದಬುದ್ಧಿಯವನಾದ ತಾನು ಭಕ್ತಿ ಪುರಸ್ಸರವಾಗಿ ಸ್ತುತಿ ಮಾಡಿರುವುದಾಗಿ ಹೇಳಿದ್ದಾರೆ. ಇವರು ರಚಿಸಿರುವ ಆರು ಕೃತಿಗಳಲ್ಲಿ ನಾಲ್ಕು ಕೃತಿಗಳು ಪ್ರಕಾಶವಾಗಿವೆ. ಇನ್ನು ಎರಡು ಕೃತಿಗಳು ಬೆಳಕು ಕಂಡಿಲ್ಲ. ಶ್ರೀರಾಮ ಶಬ್ದಾರ್ಥ ಗರ್ಭಿತ ಅಣು ಭಾಷ್ಯ ವಿವರಣಂ ಹಾಗೂ ಶ್ರೀವಾಮನ ಶಬ್ದಾರ್ಥ ಮಾಲಿಕಾ ಇನ್ನು ಪ್ರಕಾಶನ ಗೊಳ್ಳಬೇಕಾಗಿದೆ.

## ರತ್ನಮಾಲಿಕೆಗಳ ಉಪಸಂಹಾರ ಮಾಡುವಾಗ

ರಾಮ : ಆನಂದ ಜನಕಂ ಮಾ–ತೀರ್ಥ ಯಸ್ಮಾತ್ಸುಃರಾಮಃ । **ಅನಂದತೀರ್ಥಃ ತಸ್ಮಿನ್ ಆ–ಸ್ಥಿತಿ ಆನಂದತೀರ್ಥ ಹೃದಕಃ ವ್ಯತ್ಯಯಃ ಸ್ವಾತಂತ್ರ್ಯ ಸೂಚಕ :**

**ರಾಮನೆಂದರೆ** ಆನಂದ ಜನಕನಾದ ತೀರ್ಥ ಆನಂದ ತೀರ್ಥ. ಆನಂದ ತೀರ್ಥರ ಹೃತ್ಕಮಲ ನಿವಾಸಿಯಾದ ಶ್ರೀರಾಮನೇ ಆನಂದತೀರ್ಥರು. ಅಂತಹ ಪರಂಪರೆಯಲ್ಲಿ ವಿರಾಜಮಾನರಾದ ಶ್ರೀ ಸತ್ಯಪರಾಯಣ ತೀರ್ಥರು ಆನಂದ ಪ್ರದಾಯಕರು, ಭಗವದನುಗ್ರಹ ದೊರಕಿಸಿ ಕೊಡುವಂತಹ ಮಹಾಮಹಿಮರು. ಶ್ರೀ ಸೀತಾರಾಮನ ನಿತ್ಯೋಪಾಸಕರಾದ ಇವರು ದಾನ ಚಿಂತಾಮಣಿಗಳು. ದುರಿತಕ್ಷಯ ನಿವಾರಕರು, ಭಕ್ತಾಭೀಷ್ಟ ಪ್ರದಾಯಕರು, ಕೊಡುಗೈ ದೊರೆಗಳು. ಭಕ್ತಾಭೀಷ್ಟವನ್ನು ನೆರವೇರಿಸುವಂತ ಯತಿವರೋತ್ತಮರು. ಮಾಯಾವಾದಿಗಳನ್ನು ಸಿಂಹವು ಯಾವ ರೀತಿ ಆನೆಗಳ ಕುಂಭಸ್ಥಳವನ್ನು ಸೀಳುವುದೋ ಆ ರೀತಿ ಸೋಲಿಸಿ ವಿಜೃಂಭಿಸಿದ ಯತಿವರೇಣ್ಯರು. **ಹರಿಯ ಸರ್ವೋತ್ತಮತೆಯ** ಪ್ರತಿಪಾದಕರು, ಭಕ್ತರ ಎಲ್ಲಾ ಪಾಪವನ್ನು ನಿವಾರಿಸುವರು.

ಇವರ ವೃಂದಾವನವು ಬೆಂಗಳೂರು ಹಿಂದೂಪುರಕ್ಕೆ ಹೋಗುವ ಮುಖ್ಯರಸ್ತೆಯ ಬದಿಯಲ್ಲಿ ಮೂರು ಕಿಲೋ ಮೀಟರ್ ದೂರದಲ್ಲಿರುವ ಸಂತೇಬಿದನೂರಿನಲ್ಲಿದೆ. ಸಂತೇಬಿದನೂರು ಉತ್ತರ ಪಿನಾಕಿನಿ ನದಿ ದಂಡೆಯ ಮೇಲಿದೆ. ಇವರ ವೃಂದಾವನವು ಶ್ರೀ ಸತ್ಯವರತೀರ್ಥರ ವೃಂದಾವನದ ಪಕ್ಕದಲ್ಲಿದೆ. ಶ್ರೀ ಸತ್ಯವರತೀರ್ಥರ ವೃಂದಾವನವಿರುವ ಮಠಕ್ಕೆ ದೊಡ್ಡಮಠವೆಂದು, ಶ್ರೀ ಸತ್ಯಪರಾಯಣರ ವೃಂದಾವನವಿರುವ ಮಠಕ್ಕೆ ಚಿಕ್ಕಮಠವೆಂದು ಕರೆಯುತ್ತಾರೆ. **ಶ್ರೀ ಸತ್ಯಪರಾಯಣರು ಪೂರ್ವಾಶ್ರಮದಲ್ಲಿ ಶ್ರೀ ಸತ್ಯಸಂಧರ ಮೊಮ್ಮಕ್ಕಳು.** ಶ್ರೀ ಸತ್ಯಸಂಧರ ಪೂರ್ವಾಶ್ರಮದ ಹೆಸರು ಹಾವೇರಿ ರಾಮಚಂದ್ರಚಾರ್ಯರು. ಅವರ ಮಗ ಶ್ರೀ ಸ್ವಾಮಿರಾಯಾಚಾರ್ಯರು. ಅವರ ಮಕ್ಕಳೇ ಶ್ರೀ ಗುರುರಾಯಾಚಾರ್ಯರು. ಅವರೇ ಶ್ರೀ ಸತ್ಯ ಪರಾಯಣ ತೀರ್ಥರು. ಶ್ರೀ ಸತ್ಯವರತೀರ್ಥರು, ಶ್ರೀ ಸತ್ಯಸಂಧತೀರ್ಥರು, ಅಣ್ಣ ತಮ್ಮಂದಿರ ಮಕ್ಕಳು. ತಾತ ಹಾಗೂ ಮೊಮ್ಮಗ ಇಬ್ಬರು ಶ್ರೀ ಉತ್ತರಾದಿ ಮಠದ ಸ್ವಾಮಿಗಳು ಆಗಿರುವುದು ಒಂದು ವಿಶೇಷ. ಅಂತಹ ಇನ್ನೊಂದು ವಿಶೇಷ, ಮಹಾಮಹಿಮರಾದ ಅಪರೋಕ್ಷ ಜ್ಞಾನಿಗಳಾಗಿದ್ದ ಶ್ರೀ ಸತ್ಯ ಪ್ರಮೋದ ತೀರ್ಥರು ಹಾಗೂ ಈಗಿನ ಶ್ರೀ ಸತ್ಯಾತ್ಮತೀರ್ಥರು.

**ಶ್ರೀ ಸತ್ಯಸಂತುಷ್ಟರಿಂದ** ಶ್ರೀ ಸತ್ಯಪರಾಯಣರು ಆಶ್ರಮ ಪಡೆದರು. ಶ್ರೀ ಸತ್ಯ ಸಂತುಷ್ಟರು ಪ್ಲವ ಸಂವತ್ಸರದ ಫಾಲ್ಗುಣ ವದ್ಯ 30ರಂದು ಮೈಸೂರಿನಲ್ಲಿ ವೃಂದಾವನಸ್ಥರಾದರು. ಇವರಿಗೆ ದೇಹಾಲಸ್ಯ ಕಂಡು ಬಂದಾಗ ಕಲ್ಲಾಪುರದ ಭೀಮವರಾಹಾಚಾರ್ಯರೆಂಬುವರು, ದಿವಾನ್ ವೆಂಕಟರಾಯರ ಸಹಾಯದಿಂದ ಮಠದ ಪಟ್ಟವು ತಮಗೇನೇ ಆಗಬೇಕೇಂಬ ಉದ್ದೇಶದಿಂದ ಮಠದ ಒಡವೆಗಳು ಹಾಗೂ ಅಮೂಲ್ಯ ಆಭರಣಗಳು ಇಂಗ್ಲೀಷ್ ಹಾಗೂ ಮೈಸೂರು ಸರ್ಕಾರದ ವಶದಲ್ಲಿರ ಬೇಕೆಂದು ಶಾಸನ ಪತ್ರ ತಂದರು. ಮಠದವರು ಬಹಳ ಕಷ್ಟದಿಂದ ಆ ಶಾಸನ ವನ್ನು ಜಾರಿಗೊಳಿಸದಂತೆ ಹಿಂದಿರುಗಿಸಿದರು. ತದನಂತರ ಮಹಾರಾಜರ ಅನುಮತಿಯಿಂದ ಪಾರಪತ್ಯ ಬಾಳಾಚಾರ್ಯರು, ಬ್ರಹ್ಮಾಂಡ ವಿಷ್ಣು ಪಾದಾಚಾರ್ಯರು, ಶ್ರೀ ಸತ್ಯಸಂಧರ ವಂಶಸ್ಥರಾದ ಆಶ್ರಮಪೂರ್ವ ಮೊಮ್ಮಕ್ಕಳಾದ ಶ್ರೀ ಹಾವೇರಿ ಗುರುರಾಯಾಚಾರ್ಯರಿಂದ ಸಂಪ್ರದಾಯದಂತೆ ಯಾವತ್ತೂ ಸಂಸ್ಥಾನದ ಕಾರ್ಯ ನಡೆಸುತ್ತೇವೆ ಎಂದು ಕರಾರನ್ನು ಬರೆಸಿ ಕೊಂಡು ಆಶ್ರಮವನ್ನು ಅವರಿಗೆ ಕೊಟ್ಟರು. ಶ್ರೀಗಳವರು ಮೈಸೂರಿನಲ್ಲಿ ಶ್ರೀಮದುತ್ತರಾದಿ ಮಠದಲ್ಲಿ **ಶ್ರೀ ಸತ್ಯ ಸಂಕಲ್ಪತೀರ್ಥರ** ವೃಂದಾವನದ ಬಳಿ **ಶ್ರೀ ಸತ್ಯಸಂತುಷ್ಟತೀರ್ಥರ** ವೃಂದಾವನವನ್ನು ಹಾಗೂ **ಪ್ರಾಣದೇವರನ್ನು** ಪ್ರತಿಷ್ಟಾಪಿಸಿ ಗುರುಗಳ ಆರಾಧನೆಯನ್ನು ವಿಜೃಂಭಣೆಯಿಂದ ಮಾಡಿದರು.

ಆಶ್ರಮಪೂರ್ವದಲ್ಲಿ ಶ್ರೀ ಸತ್ಯಪರಾಯಣತೀರ್ಥರು ಕೆಲವು ಕಾಲ ತಹಸೀಲ್ದಾರರಾಗಿ ಕೆಲಸ ಮಾಡುತ್ತಿದ್ದರು. ಆದ್ದರಿಂದ ಆಡಳಿತ ವಿಚಕ್ಷಣೆ ಮತ್ತು ಕಾರ್ಯ ನಿರ್ವಹಣೆ ಚೆನ್ನಾಗಿ ತಿಳಿದಿತ್ತು. ಇವರು ಶ್ರೀ ಸತ್ಯ ಸಂತುಷ್ಟರಿಂದ ಆಶ್ರಮವಹಿಸಿಕೊಂಡ ಮೇಲೆ ಪ್ರಥಮ ಆದ್ಯತೆಯನ್ನು ಮಠದ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಲು ಕೊಟ್ಟರು. ಶ್ರೀ ಸತ್ಯಸಂಕಲ್ಪರ ಹಾಗೂ ಶ್ರೀ ಸತ್ಯಸಂತುಷ್ಟರ ಕಾಲದಲ್ಲಿ ವ್ಯವಸ್ಥಿತವಾದ ಆಡಳಿತವಿಲ್ಲದೇ ಸಂಸ್ಥಾನವು ಆರ್ಥಿಕವಾಗಿ ಬಹಳ ದುಃಸ್ಥಿತಿಯಲ್ಲಿದ್ದಿತು. ಶ್ರೀ ಮಹಾಸಂಸ್ಥಾನದ ಭವ್ಯ ಪರಂಪರೆಯನ್ನು ಉಳಿಸಿ ಕಾಪಾಡಿಕೊಂಡು ಬರಲು ಹಾಗೂ ಅಭಿವೃದ್ಧಿಗೊಳಿಸಲು ಶ್ರೀ ಸತ್ಯಪರಾಯಣರು ಬಹಳವಾಗಿ

ಶ್ರಮಿಸಬೇಕಾಗಿತ್ತು. ಅದೂ, ಪೀಠಕ್ಕೆ ಬಂದ ಹೊಸದರಲ್ಲಿಯೇ ಅತಿ ತ್ವರಿತ ಗತಿಯಲ್ಲಿಯೇ ಮಾಡಬೇಕಾಗಿತ್ತು. ಶ್ರೀ ಸತ್ಯ ಸಂಕಲ್ಪರ ಕಾಲದಲ್ಲಿ ಸಂಸ್ಥಾನದ ಒಡವೆ, ವಸ್ತು ಹಾಗೂ ಆಭರಣಗಳನ್ನು ಎರಡು ಲಕ್ಷ ರೂಪಾಯಿಗಳಿಗೆ ವತ್ತೆ ಹಾಕಲಾಗಿತ್ತು. ಶ್ರೀಗಳವರು ತಾವು ಮಾಡಿದ ತಹಸೀಲ್ದಾರ್ ಹುದ್ದೆಯ ಅನುಭವದಿಂದ ಹೇಗಾದರೂ ವತ್ತೆ ಹಾಕಿರುವ ಒಡವೆಗಳನ್ನು ಬಿಡಿಸಿಕೊಳ್ಳಬೇಕೆಂದು ದೃಢ ನಿಶ್ಚಯಿಸಿ ಶ್ರೀಮಂತ ಹಾಗೂ ಅನುಕೂಲಸ್ಥರಾದ ಮಠದ ಶಿಷ್ಯರು ತಮ್ಮ ಎರಡು ತಿಂಗಳ ವರಮಾನ ಅಥವಾ ಸಂಬಳವನ್ನು ಭಿಕ್ಷಾ ಅಥವಾ ಪಾದಪೂಜಾ ಮಾಡಿಸಬೇಕಾದರೆ ಕೊಡಬೇಕೆಂಬ ಕಟ್ಟಳೆಯನ್ನು ಅನುಷ್ಠಾನಕ್ಕೆ ತಂದರು. ಇದರಿಂದ ಮಠದ ಆದಾಯ ಹೆಚ್ಚಾಯಿತು. ವತ್ತೆ ಹಾಕಿದ್ದ ಒಡವೆಗಳನ್ನು ಬಿಡಿಸಿಕೊಳ್ಳಲಾಯಿತು. ಈ ಕಟ್ಟಳೆ ಬಹಳ ವರ್ಷಗಳವರೆವಿಗೂ ಜಾರಿಯಲ್ಲಿತ್ತು. ಮಠದ ಆರ್ಥಿಕ ಸ್ಥಿತಿಯನ್ನು ಉತ್ತಮ ಗೊಳಿಸುವುದೇ ಪ್ರಥಮ ಗುರಿಯಾಗಿ ಇಟ್ಟುಕೊಂಡು ಶ್ರಮಿಸುತ್ತಿದ್ದ ಇವರನ್ನು ಕಂಡು ಒಬ್ಬನು ಇವರು **'ಸತ್ಯಪರಾಯಣರೋ ಅಥವಾ ವಿತ್ತಪರಾಯಣರೊ'** ಎಂದನಂತೆ.

ಶ್ರೀ ಸತ್ಯಭೋದರ ಹಾಗೂ ಶ್ರೀ ಸತ್ಯಧರ್ಮರ ಕಾಲದಲ್ಲಿದ್ದ ಬಂಗಾರು ಮಂಟಪವನ್ನು ವತ್ತೆ ಹಾಕಲಾಗಿತ್ತು. ಬಂಗಾರ ಮಂಟಪದ (Throne) ವಿವರಣೆಯು ಬಾಂಬೆ ಗೆಜೆಟೀಯರ್, ಕರ್ನಾಟಕ – (ಧಾರವಾಡ ಡಿಸ್ಟ್ರಿಕ್ಟ್– ಚಾಪ್ಟರ್ III , ಪುಟಗಳು 58–59, (ಸಂಪಾದಿಸಿ ಮತ್ತು ಪ್ರಕಾಶಿಸಿರುವವರು ಜೇಮ್ಸ್ ಎಂ. ಕ್ಯಾಪ್ ಬೆಲ್, 1863 ಕ್ರಿ.ಶ.ನೇ. ಇಸವಿ)ಯಲ್ಲಿ ದೊರೆಯುತ್ತದೆ.

"...............During the rule of thirty eight years Sathayabodha Thirtha travelled all over India and was respected by all the Hindu Princes of the time. He was very learned and holy and performed such great austerities that the people were afraid to approach him, lest he should discover their hidden sins. At the same time he was most generous and popular and is held next in order of merit to Jayarayacharya or third to the great Sarvajna. His name is so much revered that the chief branch of the vaishnava sect, to which more than two thirds of the vaishnava people belong, is still known as

Sathyabodha's sect. In his time the religious house called 'Uttaradi Mutt' at Savanur and subsequently after his name called Sathyabodha Swamiji's Mutt, gained great wealth. A throne of gold and silver and precious stones about four feet square and six feet high was made and very costly jewels were bought for **'RAM'**, the God of the monastery. Most of this wealth is enjoyed by the present chief priest Sathyaparayana who is sixth in succession to Sathyabodha...."

ಬಂಗಾರದ ಮಂಟಪವನ್ನು ಪುನಃ ಮಠಕ್ಕೆ ದೊರಕಿಸಿಕೊಟ್ಟ ಮಹಾ ಮಹಿಮರಾದ ಶ್ರೀ ಸತ್ಯ ಪರಾಯಣರು ನಿಜಕ್ಕೂ ಸ್ತುತ್ಯರು. ಬಂಗಾರದ ಗಂಗಾಳವನ್ನು, ನವರತ್ನ ಖಚಿತ ಬಂಗಾರು ಮಂಟಪವನ್ನು, ಆಭರಣ ಗಳನ್ನು ಮರಳಿ ದೊರಕಿಸಿ ಕೊಟ್ಟು ಸುಮಾರು ಹನ್ನೆರಡು ವರ್ಷಗಳಿಂದಲೂ ಉಂಟಾದ ಕೊರತೆಯನ್ನು ಹೋಗಲಾಡಿಸಿ ಶ್ರೀರಾಮ ದೇವರ ಪೂಜಾ ವೈಭವವನ್ನು ಹೆಚ್ಚಿಸಿದ ಮಹಾನುಭಾವರು. ಮೊದಲೇ ಸೌಂದರ್ಯಖನಿ ಯಾದ, ಮನಮೋಹನ ಮೂರ್ತಿ ಚೆಲುವ ಸುಂದರನಾದ ಶ್ರೀ ಮೂಲರಾಮದೇವರ ಹಾಗೂ ಶ್ರೀ ಸೀತಾದೇವಿ ವಿಗ್ರಹಗಳಿಗೆ ಮತ್ತಷ್ಟು ಮೆರಗನ್ನು ಕಲ್ಪಿಸಿದವರು **ಶ್ರೀ ಸತ್ಯಪರಾಯಣರು.**

ಶ್ರೀ ಸತ್ಯಪರಾಯಣರಲ್ಲಿ ಶಿಷ್ಯ ವೃತ್ತಿಯನ್ನು ಮಾಡಿ **ಹರಿಕಥಾಮೃತಸಾರಕ್ಕೆ ಟಿಪ್ಪಣಿ** ಬರೆದ **ಸಂಕರ್ಷಣ ಒಡೆಯರು** ತಮ್ಮ ಶಿಷ್ಯವೃತ್ತಿಯನ್ನು ಪರಿಪೂರ್ಣಗೊಳಿಸಿ ಗುರುಗಳ ಆಶೀರ್ವಾದ ಪಡೆದು ಮರಳುವಾಗ ತಮ್ಮ ಗುರುಗಳ ಮನಸ್ಸನ್ನು ಅರಿತು ತಮ್ಮ ತಂದೆ ಆಗರ್ಭ ಶ್ರೀಮಂತರಾದ ಭೂಮಪ್ಪ ನಾಯಕರಲ್ಲಿ ವತ್ತೆ ಹಾಕಲ್ಪಟ್ಟಿದ್ದ ಮಠದ ಪೂಜಾ ವಸ್ತುಗಳನ್ನು ತಮ್ಮ ಮನೆತನಕ್ಕೆ ಬರಬೇಕಾದ ಹಣ ಸಂದಾಯವಾಗಿದೆ ಎಂದು ಬರೆದು ಕೊಟ್ಟು ತಮ್ಮ ಅಣ್ಣಂದಿರಿಂದ ಮಠದ ಯಾವತ್ತೂ ಪೂಜಾವಸ್ತುಗಳನ್ನು ಬಿಡಿಸಿಕೊಟ್ಟು ಶ್ರೀಪಾದರ ಪಾದಕಮಲಗಳಿಗೆ ಅರ್ಪಿಸಿದರು. ಸಕಲ ಶಾಸ್ತ್ರಾಭ್ಯಾಸ ಮಾಡಿ, ಶ್ರೀ ವಿಜಯದಾಸರ ಪರಮಾನುಗ್ರಹಕ್ಕೆ ಪಾತ್ರರಾದ ಶ್ರೀ ಜಗನ್ನಾಥ ದಾಸರ ಮೇರು ಕೃತಿಯಾದ ಶ್ರೀ ಹರಿಕಥಾಮೃತಸಾರದ ಉಪಮೇಯಗಳ ಸೌಂದರ್ಯವನ್ನು ಶ್ರೀ ಸತ್ಯಪರಾಯಣತೀರ್ಥರ

ಶಿಷ್ಯರಾದ ಶ್ರೀ ಸಂಕರ್ಷಣ ಒಡೆಯರು ಮಾಧ್ವ ಸಿದ್ಧಾಂತ ಅಲಂಕಾರಗಳಿಗೆ ಅನುಗುಣವಾಗಿ ವ್ಯಾಖ್ಯಾನಿಸಿದ್ದಾರೆ.

ಶ್ರೀ ಸತ್ಯಸಂತುಷ್ಟರು ಕೇವಲ 8 ತಿಂಗಳು 14 ದಿನಗಳು ಮಾತ್ರ ಶ್ರೀಮೂಲರಾಮರ ಪೂಜೆ ಹಾಗೂ ಸಂಸ್ಥಾನವನ್ನು ನಡೆಸಿದರು. ಅವರು ದೇಶ ಸಂಚಾರ ಮಾಡಿದುದು ಎಲ್ಲೂ ಕಾಣಿಸುವುದಿಲ್ಲ. ಆದ್ದರಿಂದ ಮಠದ ಶಿಷ್ಯರು ಮಂತ್ರ ಮುದ್ರಾಧಾರಣೆಯಿಂದ ವಂಚಿತರಾಗಿದ್ದರು. ಅ ಕೊರತೆ ಯನ್ನು ನೀಗಲು ಹಾಗೂ ಮಠದ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಶ್ರೀ ಸತ್ಯಪರಾಯಣರು ವಿಸ್ತೃತ ದೇಶ ಸಂಚಾರ ಕೈಗೊಂಡರು. ಒಂದು ಕ್ಷೇತ್ರದಿಂದ ಇನ್ನೊಂದು ಕ್ಷೇತ್ರಕ್ಕೆ ಯಾತ್ರೆ ಮಾಡಿ ಪಡೆಯುವ ದೇಹ ಶಾಂತಿಯನ್ನು ಶ್ರೀ ಸತ್ಯಪರಾಯಣರು ಭಕ್ತರಿಗೆ ಮಾಡಿಕೊಟ್ಟರು.

**ಕ್ಷೇತ್ರ ಕ್ಷೇತ್ರ ಕ್ಷೇತ್ರ ಗಮನ ಶುದ್ಧ ಕ್ಷೇತ್ರ ಶ್ರೀಕರಂ**
**ಕ್ಷೇತ್ರ ಸರ್ವ ಕ್ಷೇತ್ರವಾಸಿ ಪೂರ್ವದರ್ಶನಂ**
**ಕ್ಷೇತ್ರ ದಿವ್ಯ ಚಿತ್ರ ಮಹಿಮಾ ಸಿಂಧು ಸಿಂಧು ಪೋಶಕಂ**
**ಸತ್ಪರಾಯಣಭಿಧೇಯ ಸನ್ಮುನಿಂಭಜೇನಿಶಂ**

ಸರ್ವಕ್ಕೂ ಆಧಾರವಾದ ಶ್ರೀ ವಿಷ್ಣುವಿನ ದಿವ್ಯ ಮಹಿಮೆಗಳ ಮಹಾಸಾಗರದಲ್ಲಿ ವಿಹರಿಸುವವರಿಗೆ ಇವರು ದೋಣಿಯಂತಿದ್ದರು.

ಶ್ರೀ ಸತ್ಯಪರಾಯಣರು ಪಂಪಾಕ್ಷೇತ್ರಕ್ಕೆ ಹೋಗಿ ಅಲ್ಲಿಯ ಯಂತ್ರೋದ್ಧಾರ ಪ್ರಾಣದೇವರ ದರ್ಶನ ಮಾಡಿ ಶ್ರೀ ಕೋದಂಡಸ್ವಾಮಿಯ ಪೂಜೆಯನ್ನೈದರು. ಅಲ್ಲಿಂದ ಮುಂದೆ ನವವೃಂದಾವನ ಸಂದರ್ಶಿಸಿ ಶ್ರೀ ಸತ್ಯಪರಾಯಣರು ಚಂದ್ರಿಕಾಚಾರ್ಯರಾದಿ ಗುರುಗಳಿಗೆ ಹಸ್ತೋದಕಾದಿಗಳನ್ನು ಮಾಡಿ ಅನ್ನ ಸಂತರ್ಪಣೆಯನ್ನು ವಿಜೃಂಭಣೆಯಿಂದ ನಡೆಸಿದರು. ಶಾಸ್ತ್ರವೇತ್ತರಾಗಿದ್ದ ಶ್ರೀಗಳವರು **ಶ್ರೀಮಠದ ಮೂಲದೇವರಾದ** ಶ್ರೀರಾಮಚಂದ್ರಮೂರ್ತಿಗೆ ಏಕಾದಶಿ ದಿನದಂದು ಗಂಧ ಸಮರ್ಪಣೆ ಮಾಡುತ್ತಿದ್ದರು. ಅದಕ್ಕೆ **"ಓಂ ವ್ಯತಿರೇಕೋ ಗಂಧವತ್ತಧಾಹಿ ಧರ್ಮಯತಿ ಓಂ"** ಎಂದು ಬ್ರಹ್ಮಸೂತ್ರವನ್ನು ಪ್ರಮಾಣವಾಗಿ ಹೇಳಿದರು. ಇವತ್ತಿಗೂ ಈ ಆಚಾರ ಶ್ರೀ ಉತ್ತರಾದಿ ಮಠದಲ್ಲಿದೆ.

ನಿಜಾಮು ಸಂಸ್ಥಾನದ ದಿವಾನರಾಗಿದ್ದ ಚಂದುಲಾಲ್‌ನಿಂದ ಕುಂಬಾರಿಮಗು ಗ್ರಾಮಗಳನ್ನು ಬಹುಮಾನವಾಗಿ ಪಡೆದರು. ಹೈದರಾಬಾದ್ ಲಿಂಗಂಪಲ್ಲಿಯ ಮಠದಲ್ಲಿ ಶ್ರೀ ಪ್ರಾಣದೇವರ ಹಾಗೂ ಈಶ್ವರನನ್ನು ಪ್ರತಿಷ್ಠೆ ಮಾಡಿದರು. **ಮುಂದೆ ಬಿಜಾಪುರದಲ್ಲಿ ಶ್ರೀ ಸತ್ಯಸಂದರ ವಂಶಸ್ಥರೇ ಆದ ತಾವು ಸ್ವಪ್ನಲಬ್ಧವಾದ ಶ್ರೀ ಸತ್ಯಸಂಧತೀರ್ಥರ ಅಷ್ಟಕೋನಾಕೃತಿಯ ವೃಂದಾವನವನ್ನು ಪ್ರತಿಷ್ಠಾಪಿಸಿದರು. ಅಲ್ಲದೇ, ಯಲಗಿರಿಯಲ್ಲಿ ಪ್ರಾಣ ದೇವರಿಗೆ ಬೆಳ್ಳಿಯ ಕವಚ ವನ್ನು ಪಾದಗಳಿಗೆ ಮಾಡಿಸಿಕೊಟ್ಟರು.** ಸ್ವಾಮಿಗಳು ಕಾಶಿಯಲ್ಲಿ ವಿದ್ವತ್ಸಭೆ ನಿರ್ವಹಿಸಿದರು. ಪಂಡಿತರುಗಳನ್ನು ಸತ್ಕರಿಸಿದರು. ಡಿಲ್ಲಿಯಲ್ಲಿ ಶ್ರೀಮಂತ ಬಾಜೀರಾಯನು ಶ್ರೀ ಸತ್ಯಪರಾಯಣರನ್ನು 30 ಸಾವಿರ ರೂಪಾಯಿ, ಮುತ್ತಿನಹಾರ, ವೈಜಯಂತಿಮಾಲ, 12 ಆನೆಗಳು, ಬೆಳ್ಳಿ ಬಂಗಾರದ ಆಭರಣ ಗಳಿಂದ ಸತ್ಕರಿಸಿದನು.

ಶ್ರೀ ಸತ್ಯಪರಾಯಣರು ವಿದ್ವನ್ಮಣಿಗಳು ಮಾತ್ರವಲ್ಲದೇ ವ್ಯವಹಾರ ಚತುರರು. ಅವರು ಉತ್ತರ ದೇಶದ ಸಂಚಾರ ಮಾಡಬೇಕಾದ ಕಾಲದಲ್ಲಿ ತಡೆಯಿಲ್ಲದ ದಾರಿಯು ಸಂಸ್ಥಾನಕ್ಕೆ ಸಿಗುವುದು ಕಷ್ಟಸಾಧ್ಯವೆಂದು ಅರಿತು ಸಂಸ್ಥಾನದ ಚಿಹ್ನೆಗಳ ಸಹಿತವಾಗಿ ಖರ್ನಿಸ ಭೋದರಾಯಾಚಾರ್ಯರನ್ನು ಕಲ್ಕತ್ತೆಗೆ ಕಳುಹಿಸಿ ಬ್ರಿಟಿಷ್ ಸರ್ಕಾರವಿರುವವರೆವಿಗೆ ಶ್ರೀ ಉತ್ತರಾದಿ ಮಠದ ಸಂಸ್ಥಾನವು ಎಲ್ಲಿ ಬೇಕಾದರೂ, ಯಾವ ತರಹದ ಸುಂಕವು ತೆರದೆ ಸಂಚರಿಸಬಹುದೆಂದು ಶಾಸನ ಪತ್ರವನ್ನು ಪಡೆಯಲು ಶಕ್ಯರಾದರು.

ಸಾಂಗಲಿಯಲ್ಲಿ **ಶ್ರೀ ಸತ್ಯವ್ರತ ತೀರ್ಥರ** ವೃಂದಾವನವನ್ನು ಸಂದರ್ಶಿಸಿ ಪೂಜೆ ಪುನಸ್ಕಾರವನ್ನು ಪೂರೈಸಿಕೊಂಡು ಶ್ರೀಗಳವರು ಕೊಲ್ಹಾಪುರಕ್ಕೆ ಹೋದರು. ಅಲ್ಲಿ ಶ್ರೀ ಮಹಾಲಕ್ಷ್ಮಿಯ ವಿಗ್ರಹವನ್ನು ನೋಡಿ ಭಾವೋನ್ಮತ್ತ ರಾಗಿ, ತದಾತ್ಮತೆಯಿಂದ ನಿಂತಲ್ಲಿಯೇ ಶ್ರೀ ಲಕ್ಷ್ಮೀದಂಡಕ ಸ್ತೋತ್ರವನ್ನು ರಚಿಸಿ ಹೇಳಿದರು. ಶ್ರೀ ಮಹಾಲಕ್ಷ್ಮಿಗೆ ಲಕ್ಷ ಕುಂಕುಮಾರ್ಚನೆ ಮಾಡಿ ಸಾವಿರ ಜನ ಮುತ್ತೈದೆಯರಿಗೆ ಸೀರೆ ಕುಪ್ಪಸಗಳನ್ನು ಕೊಟ್ಟರು. **'ನ ಭೂತೋ ನ ಭವಿಷ್ಯತಿ'** ಎಂಬಂತೆ ಒಂದು ಸಾವಿರ ದಂಪತಿಗಳ ಅನ್ನ ಸಂತರ್ಪಣೆ ಮಾಡಿಸಿದ ಮಹಾಪ್ರಭುಗಳು **ಶ್ರೀ ಸತ್ಯಪರಾಯಣರು.** ಕೊಲ್ಹಾಪುರದಲ್ಲಿ

ಅಲ್ಲಿಯ ರಾಜನು ಶ್ರೀಗಳನ್ನು ಉಚಿತ ರೀತಿಯಲ್ಲಿ ಸತ್ಕರಿಸಿ ಎರಡು ಆನೆಗಳನ್ನು 25 ರೋಹಿಲ ಸಿಪಾಯಿಗಳನ್ನು ಕಾಣಿಕೆಯಾಗಿ ಕೊಟ್ಟನು.

ಶ್ರೀಸತ್ಯಪರಾಯಣ ತೀರ್ಥರು ಶ್ರೀಮದಾನಂದತೀರ್ಥರ ಪೂರ್ಣಾನುಗ್ರಹ ಪಾತ್ರರಾಗಿದ್ದರು. ಪ್ರಾಣದೇವರನ್ನು ಸಾಕ್ಷಾತ್ಕರಿಸಿಕೊಂಡವ ರಾಗಿದ್ದರು ನಿತ್ಯರಾಮೋಪಾಸಕರಾಗಿದ್ದರು. ಒಮ್ಮೆ, **ಶ್ರೀಮದಾಚಾರ್ಯರ ಸಾಕ್ಷಾತ್** ಶಿಷ್ಯರಾದ **ಮಾಧವತೀರ್ಥರು** ಸ್ವಪ್ನದಲ್ಲಿ ಕಾಣಿಸಿಕೊಂಡು ತಮ್ಮ ವೃಂದಾವನವು (ಪುನರ್ ಪ್ರತಿಷ್ಠಿತವಾದದ್ದು) ಪ್ರವಾಹದಿಂದ ಜಲಾವೃತವಾಗಿದೆಯೆಂದು, ಶ್ರೀ ವೇದೇಶ ತೀರ್ಥರ ವೃಂದಾವನದ ಬಳಿ ಮಣ್ಣೂರಿನಲ್ಲಿ ಸ್ಥಳಾಂತರಿಸ ಬೇಕೆಂದು ಸೂಚನೆಯಿತ್ತರಂತೆ. ಆದ್ಯ ಮನೆತನದವರಿಂದ ಶ್ರೀ ಸತ್ಯಪರಾಯಣತೀರ್ಥರು ನೆರವೇರಿಸಿದರಂತೆ. ಶ್ರೀಮಾಧವತೀರ್ಥರು ಮಹಾಮಹಿಮರು ಜ್ಞಾನ ವೈರಾಗ್ಯ ಶಿಖಾಮಣಿಗಳು. ಅವರು ಸ್ವಪ್ನಗೋಚರವಾಗಿ ತಮ್ಮ ವೃಂದಾವನವನ್ನು ಸ್ಥಳಾಂತರಿಸಲು ಹೇಳಿದರೆಂದರೇ ಶ್ರೀ ಸತ್ಯಪರಾಯಣತೀರ್ಥರು, ಶ್ರೀಮದಾನಂದತೀರ್ಥರ ಪೂರ್ಣಾನುಗ್ರಹ ಪಾತ್ರರಾಗಿದ್ದರಿಂದಲೇ, ಸೂಚನೆಯಾಯಿತು.

ಗಯಾಕ್ಕೆ ಶ್ರೀಗಳವರು ಬಿಜಯಿಸಿದಾಗ ಅವರ ಪಾಂಡಿತ್ಯ ಹಾಗೂ ಮಹಿಮೆಯನ್ನು ಕಂಡು ಗಯಾವಾಡಗಳು ಶ್ರೀ ಸತ್ಯಸಂಧರ ಕಾಲದಲ್ಲಿ ತಮಗಾದ ಕಹಿ ಅನುಭವವನ್ನು ಸ್ಮರಣೆಗೆ ತಂದುಕೊಂಡು ಶ್ರೀಗಳನ್ನು ಬಹಳವಾಗಿ ಗೌರವಿಸಿ ವಿಶೇಷ ದ್ರವ್ಯದಿಂದ ಸತ್ಕರಿಸಿದರು. ಶ್ರೀ ಉತ್ತರಾದಿ ಮಠಾದೀಶರಾರು ಭೇಟಿ ನೀಡದ ನಾಗಪುರದಲ್ಲಿ ಬ್ರಹ್ಮವರಾತ, ರಾಮಘಟ್ಟ ಮತ್ತು ಲಕ್ಷಣ ಘಟ್ಟ ಮತ್ತು ಇತರೆ ಸಂದರ್ಶಿಸುವ ಸ್ಥಳಗಳಿಗೆ ಭೇಟಿ ನೀಡಿದರು. ಅಲ್ಲಿಯ ಜನರಿಗೆ ಶ್ರೀ ಉತ್ತರಾದಿಮಠದ ವಿಷಯ, ಆಚಾರ, ವಿಚಾರ, ನಿಯಮಗಳು ಗೊತ್ತಿರಲಿಲ್ಲವಾದುದರಿಂದ ಅವರುಗಳಿಗೆ **ಶ್ರೀ ಹಂಸನಾಮಕ ಪರಮಾತ್ಮ ಉತ್ತರನಿಂದ** ಮಠದ ಸ್ಥಾಪನೆಯಾಗಿ ಚತುರ್ಮುಖ ಬ್ರಹ್ಮನಿಂದ ಮುಂದುವರೆದು ಎಷ್ಟೋ ಮಹಾಮಹಿಮರಾದ ಮೇಲೆ ಶ್ರೀ ಮನ್ಮಧ್ವಾಚಾರ್ಯರು ಮುಂದುವರಿಸಿದ ಶ್ರೀ ಉತ್ತರಾದಿ ಮಠವೇ **ಮೂಲಮಠವೆಂದು** ತಿಳಿಯ ಹೇಳಲಾಯಿತು, ಮೂಲಮಠವಾದ ಶ್ರೀ

ಉತ್ತರಾದಿಮಠದ ಯತಿವರೇಣ್ಯರು ವಿರಕ್ತರು. ಪ್ರಪಂಚದ ಐಹಿಕ ವಿಷಯಗಳನ್ನು ಬಿಟ್ಟವರೆಂದು, ಅಲ್ಲದೇ ಅವರುಗಳು ಅಂಚಿಲ್ಲದ ಕಾವಿ ಶಾಠಿಯನ್ನು ಕೂಡ ಮಧ್ಯದಲ್ಲಿ ತುಂಡರಿಸಿ ಹೊಲಿದಿದ್ದು ಮತ್ತು ಪೇಟವನ್ನು ಧರಿಸಬೇಕಾದ ಕೆಲ ಸಂದರ್ಭಗಳಲ್ಲಿ ಸಹ ಕಾವಿ ಶಾಠಿಯನ್ನು ತುಂಡರಿಸಿ ಧರಿಸುವರು. ಬಂಗಾರ ಒಡವೆ ಆಭರಣಗಳನ್ನು ಹಾಗೂ ಅಲಂಕಾರಿಕ ವಸ್ತುಗಳನ್ನು ಧರಿಸುವುದಿಲ್ಲವೆಂದು ಕೇವಲ ತುಳಸಿ ಮಾಲೆಯನ್ನು ಮಾತ್ರ ಧರಿಸುವರು. ಸಂಚಾರ ಕಾಲದಲ್ಲಿ ನಡೆದುಹೋಗುವಾಗ ತಮ್ಮ ತಲೆ ಹಾಗೂ ಭುಜದ ಮೇಲೆ ಪೂಜಾ ಪೆಟ್ಟಿಗೆಯನ್ನು ಇಟ್ಟುಕೊಂಡು ಹೋಗುವರು. ಆನೆಯ ಮೇಲೆ ಸಂಚಾರ ಹೋಗುವಾಗ ಪೂಜ್ಯವಾದ ಗ್ರಂಥಗಳನ್ನು ಮುಂದಿಟ್ಟು ಪ್ರಾಶಸ್ತ್ಯವನ್ನು ಮತ್ತು ಗೌರವವನ್ನು ವೇದವ್ಯಾಸ ದೇವರಿಗೆ ಕೊಡುವರು. ಇದೆಲ್ಲಾ ತಿಳಿದ ಮೇಲೆ ಅಲ್ಲಿಯ ಜನರು ಭಕ್ತಿಭಾವ ಪರವಶರಾದರು. ಶ್ರೀಮೂಲ ರಾಮ ದೇವರು ಶ್ರೀಸೀತಾದೇವಿ ಹಾಗೂ ಶ್ರೀ ದಿಗ್ವಿಜಯ ರಾಮದೇವರು ಹಾಗೂ ಇತರೇ ವಿಗ್ರಹಗಳಿಗೆ ಶ್ರೀಯವರು ಮಾಡಿದ ಪೂಜಾ ವೈಭವವನ್ನು ನೋಡಿ ಕಣ್ಣುಗಳಲ್ಲಿ ಆನಂದಾಶ್ರುವನ್ನು ಸುರಿಸಿ ಪ್ರಪುಲ್ಲಿತರಾದರು. ಅಲ್ಲಿಯ ಜನರು ತೀರ್ಥ ಪ್ರಸಾದವನ್ನು ಪಡೆದು ಕೃತಾರ್ಥರಾದರು. ಮುಂದೆ ಸ್ವಾಮಿಗಳು ಹೋದಲ್ಲೆಲ್ಲಾ ವಿಷ್ಣು ಸರ್ವೋತ್ತಮತೆಯನ್ನು ಎತ್ತಿ ಹಿಡಿದು ವಿಷ್ಣು ಸರ್ವೋತ್ತಮತೆಯನ್ನು ಪ್ರತಿಪಾದಿಸಿದರು. ಶ್ರೀ ಸತ್ಯಪರಾಯಣ ತೀರ್ಥರು ಸಂಚಾರತ್ವೇನ ವಿಜಯವಾಡ ದಾರಿಯಲ್ಲಿ ಸಿಗುವ ಮೈಲಾರದಲ್ಲಿ ಶಿವರಾತ್ರಿ ದಿನದಂದು ವೈಷ್ಣವರ ಅಗ್ರಹಾರದಲ್ಲಿ ಶ್ರೀಮೂಲರಾಮದೇವರ ಪೂಜೆಮಾಡಿ ಸಾವಿರಾರು ಜನರಿಗೆ ಅನ್ನಸಂತರ್ಪಣೆ ಮಾಡಿಸುತ್ತಿರುವಾಗ ಅಲ್ಲಿಯೇ ಹತ್ತಿರದಲ್ಲಿ ರುದ್ರದೇವರ ಗುಡಿ ಬಳಿ ಅದ್ವೈತಿಗಳ ಅಗ್ರಹಾರದಲ್ಲಿ ವಾಸವಾಗಿದ್ದವರು ಊಟಕ್ಕೆ ಕುಳಿತ್ತಿದ್ದವರ ಎಲೆಯ ಮೇಲೆ ಉಸುಕನ್ನು ಹಾಕಲು ಶ್ರೀಗಳವರು ಮನನೊಂದು ಈ ಸ್ಥಳವು ಪಿಶಾಚಿಗಳ ತಾಣವಾಗಲೆಂದು ಹೇಳಿದರಂತೆ. ಮುಂದೆ ಶ್ರೀ ಸತ್ಯಜ್ಞಾನತೀರ್ಥರು ಅಲ್ಲಿಯವರ ಬೇಡಿಕೆಯಂತೆ ಮಂತ್ರಾಕ್ಷತೆ ನೀಡಿ ಹೊಸ ಅಗ್ರಹಾರವನ್ನು ಕಟ್ಟಿಕೊಳ್ಳಲು ಅನುಗ್ರಹ ಮಾಡಿದರಂತೆ. 1860ರಲ್ಲಿ ವೆಂಕಟಪೇಟೆಯಲ್ಲಿ ಶ್ರೀ ಸತ್ಯಭೋದರ ಮೃತ್ತಿಕಾ ಬೃಂದಾವನ

ವನ್ನು ಸ್ಥಾಪಿಸಿದರು. ಬಾಗಲಕೋಟೆ ಮುಳಗಡೆಯ ಕಾಲದಲ್ಲಿ ನವನಗರದಲ್ಲಿ ಪ್ರಸ್ತುತ ಪೀಠಸ್ಥರಾದ **ಶ್ರೀ ಸತ್ಯಾತ್ಮತೀರ್ಥರು** ಪುನರ್ ಪ್ರತಿಷ್ಠಾಪನೆ ಮಾಡಿದ್ದಾರೆ.

ನಾಗಪುರದಲ್ಲಿ ಕೀಲಕನಾಮ ಸಂವತ್ಸರದ ಫಾಲ್ಗುಣ ವದ್ಯ ಅಮವಾಸ್ಯೆಯಂದು ಪೂಜೆ ಮುಗಿಸಿಕೊಂಡು ಲಾತೂರಿಗೆ ಬಂದರು. ಅಲ್ಲಿ ಸಂಸ್ಥಾನದ ವಜ್ರ ವೈಢೂರ್ಯಾದಿಗಳು, ಬಂಗಾರದ ಮಂಟಪ ಹಾಗೂ ವೈಭವೋಪೇತವಾದ ದಿವ್ಯ ಮೂಲರಾಮ ದಿಗ್ವಿಜಯರಾಮ ಮತ್ತು ಸೀತೆಯನ್ನು ನೋಡಿ, ನೋಡಲು ಬಂದ ಭಕ್ತಾದಿಗಳು ಆನಂದ ತುಂದಿಲರಾದರು. ಆ ಊರಿಗೆ ಹತ್ತಿರದಲ್ಲಿಯೇ ಇದ್ದ ಕಳ್ಳರ ತಂಡವು ಮಠದ ದ್ರವ್ಯ ಒಡವೆ ವಸ್ತುಗಳನ್ನು ಹೇಗಾದರು ಮಾಡಿ ದೋಚಬೇಕೆಂದು ಸಂಚು ಮಾಡಿ ಸಾಯಂಕಾಲ ಸುಮಾರು ಎರಡು ಸಾವಿರ ಜನರು ಮುತ್ತಿಗೆ ಹಾಕಿದರು. ಲಾತೂರ ಕೋಟೆಯಲ್ಲಿದ್ದ ಶ್ರೀಗಳು ತಮ್ಮ ಶಿಷ್ಯರಷ್ಟೆ ಜನರೊಂದಿಗೆ ಇದ್ದರು. ಆಗ ಶ್ರೀಗಳು ಎಲ್ಲರಿಗೂ ಸಮಾಧಾನ ಹೇಳಿ ತಾವು ತಮ್ಮ ಆರಾಧ್ಯ ದೈವನಾದ ಶ್ರೀಮೂಲರಾಮ, ದಿಗ್ವಿಜಯರಾಮರ ಧ್ಯಾನ ಮಾಡಲುಪಕ್ರಮಿಸಿದರು.. ಮಧ್ಯರಾತ್ರಿಯಲ್ಲಿ ಶ್ರೀಗಳವರಿಗೆ ಮಂಪರಿನಲ್ಲಿ ವೀರ ಆಂಜನೇಯನು ಗದೆಯನ್ನು ಹಿಡಿದು ಮಠದ ದೇವರ ವಿಗ್ರಹಗಳನ್ನು ಕಾಯುತ್ತ ನಿಂತಿರುವಂತೆ ಗೋಚರವಾಯಿತು. ಸುರಕ್ಷತೆಯನ್ನು ಮನಗಂಡ ಮೇಲೆ ಶ್ರೀಗಳವರು ತಮ್ಮ ದೈನಂದಿನ ಪೂಜೆಯನ್ನು ಮಾರನೇ ದಿನ ಬೆಳಿಗ್ಗೆ, ಸುತ್ತುವರಿದಿದ್ದ ಕಳ್ಳರ ಭಯವಿದ್ದರೂ ಸಹ, ಮಾಡಲು- ಪಕ್ರಮಿಸಿದರು. ಪೂಜಾ ಕಾಲದಲ್ಲಿ ಕಳ್ಳರು ಬಂದು ಬೆಲೆ ಬಾಳುವ ವಸ್ತುಗಳನ್ನು ತೆಗೆದುಕೊಂಡು ಹೊರಡಲು ಅನುವಾದಾಗ ಹೊರಗೆ ಸಹಸ್ರಾರು ಕೋತಿಗಳ ಸಮೂಹ ಸುತ್ತುವರಿದು ಕಾವಲಾಗಿ ಕುಳಿತಿರುವುದನ್ನು ನೋಡಿ ಭಯಭೀತರಾಗಿ ಶ್ರೀಗಳವರಿಗೆ ಶರಣಾಗತರಾಗಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ತಮ್ಮ ದುರ್ಬುದ್ಧಿ ಹಾಗೂ ದುರಾಲೋಚನೆಯನ್ನು ತಿಳಿಸಿ ತಪ್ಪು ಒಪ್ಪಿಕೊಂಡು ದೈನ್ಯತೆಯಿಂದ ತಮ್ಮನ್ನು ಕ್ಷಮಿಸಬೇಕೆಂದು ಕೇಳಿಕೊಂಡರು. ಹಾಗೂ ತಮ್ಮಲ್ಲಿದ್ದುದೆಲ್ಲವನ್ನು ಸ್ವಾಮಿಗಳ ಪಾದಾರವಿಂದಗಳಿಗೆ

ಅರ್ಪಿಸಿದರು. ಹಾಗೂ ತಮ್ಮ ಹೀನ ವೃತ್ತಿಯನ್ನು ಬಿಟ್ಟು ಒಳ್ಳೆಯ ಸತ್ಪ್ರವೃತ್ತಿಯಲ್ಲಿ ತೊಡಗಿಸಿಕೊಂಡರು.

ಬ್ರಹ್ಮಾವರ್ತದಿಂದ ಶ್ರೀಗಳವರು ಜಗನ್ನಾಥ ಪುರಿ, ವಿಶಾಖ ಪಟ್ಟಣ, ಸಿಂಹಚಲದಲ್ಲಿ ಕೂರ್ಮ ನರಸಿಂಹ ದೇವರನ್ನು ನೋಡಿಕೊಂಡು, ಕೂರ್ಮ ಕ್ಷೇತ್ರದಲ್ಲಿ ನರಹರಿ ತೀರ್ಥರಿಂದ ಪ್ರತಿಷ್ಠಿತವಾದ ಶ್ರೀರಾಮದೇವರನ್ನು ಸಂದರ್ಶಿಸಿ ರಾಜ ಮಹೇಂದ್ರಿಗೆ ಬಂದರು. ಅಲ್ಲಿ ಬಿಡಿ ಬಿಡಿಯಾಗಿ ದೊರೆತಿದ್ದ, ಮೈಸೂರು, ಬ್ರಹ್ಮಾವರ್ತ ಮುಂತಾದ ಸ್ಥಳಗಳಲ್ಲಿ ಸಿಕ್ಕ ವಜ್ರ ವೈಢೂರ್ಯ ರತ್ನಗಳಿಂದ ಶ್ರೀ ಮೂಲರಾಮದೇವರಿಗೆ ಆಭರಣಗಳನ್ನು ಮಾಡಿಸಿದರು. ಅಲ್ಲಿಂದ ವಿಜಯನಗರಕ್ಕೆ ಹೋದರು. ವಿಜಯನಗರದಲ್ಲಿ ಮಹಾರಾಜನು ಸಂಸ್ಥಾನಕ್ಕೆ ಗ್ರಾಮ ಭೂಮಿಗಳನ್ನು ದಾನವಾಗಿ ಕೊಟ್ಟನು. ಅಲ್ಲಿಂದ ಸ್ವಾಮಿಗಳು ಮೈಸೂರಿಗೆ ಬಂದರು. ಅಲ್ಲಿ ಮೈಸೂರು ಮಹಾರಾಜರು ಶ್ರೀಗಳವರನ್ನು ಸತ್ಕರಿಸಿ ತಪ್ತ ಮುದ್ರಾಧಾರಣೆಗೋಸ್ಕರ ಬಂಗಾರದ ಮುದ್ರೆಯನ್ನು ಸಮರ್ಪಿಸಿದರು.

**ಶ್ರೀ ಪ್ರಹ್ಲಾದಾಂಶ ಸಂಭೂತರಾದ ಶ್ರೀ ಸತ್ಯಪರಾಯಣತೀರ್ಥರು** 21 ವರ್ಷ 6 ತಿಂಗಳು 7 ದಿನಗಳು ವೇದಾಂತ ಸಾಮ್ರಾಜ್ಯಾಧಿಕಾರವನ್ನು ನಡೆಸಿ, ರುಧಿರೋದ್ಗಾರಿ ನಾಮ ಸಂವತ್ಸರ ಕ್ರಿ.ಶ. 1863 ಆಶ್ವಯಜ ಶುದ್ಧ ಸಪ್ತಮಿ ದಿವಸ ಗುಲ್ವಾ ಹೊಸೂರು ಗ್ರಾಮದಲ್ಲಿ ಶ್ರೀ ಹರಿಸನ್ನಿಧಿ ಸೇರಿದರು. ಅಲ್ಲಿಯೇ ಬೃಂದಾವನಸ್ಥರಾದರು. ತರುವಾಯ 6 ತಿಂಗಳೊಳಗೆ ಸ್ವಪ್ನದಲ್ಲಿ ಸ್ವಾಮಿಗಳು ಆದೇಶಿಸಿದಂತೆ ಅವರ ಶಿಷ್ಯರುಗಳು ಶ್ರೀಗಳವರ ದೇಹವನ್ನು ಅಲ್ಲಿಂದ ತೆಗೆದು ಶ್ರೀಪಾದರ ಪೂರ್ವಾಶ್ರಮದ ಸ್ಥಳವಾದ ಉತ್ತರಪಿನಾಕಿನಿ ನದಿ ತೀರದಲ್ಲಿರುವ ಸಂತೇಬಿದನೂರು ಕ್ಷೇತ್ರದಲ್ಲಿ ಶ್ರೀಮುಖ್ಯಪ್ರಾಣ ದೇವರ ಆಲಯದೆದುರಿಗೆ **ಶ್ರೀಸತ್ಯವರತೀರ್ಥರ** ಬೃಂದಾವನಕ್ಕೆ ಸನಿಹದಲ್ಲಿ ಬೃಂದಾವನ ಮಾಡಿದರು. ಇದು ಕರಿ ಶಿಲೆಯದಾಗಿದ್ದು, ಕೂರ್ಮಾಸನದ ಮೇಲೆ ಸ್ಥಾಪಿತವಾಗಿದೆ. ಶ್ರೀಗಳವರು ತಮ್ಮ ಜೀವಿತ ಕಾಲದಲ್ಲಿಯೇ ತಾವು ಬೃಂದಾವನಸ್ಥರಾಗಬೇಕಾಗಿದ್ದ ಬೃಂದಾವನವನ್ನು ಸ್ವಹಸ್ತದಿಂದಲೇ ತಯಾರಿಸಿಕೊಂಡಿದ್ದರಂತೆ. ತಾವೇ ತಯಾರಿಸಿಟ್ಟಿದ್ದ ಬೃಂದಾವನದಲ್ಲಿ

ತಮ್ಮನ್ನು ನೆಲೆಗೊಳಿಸಬೇಕೆಂದು ಶಿಷ್ಯರಿಗೆ ಸ್ವಪ್ನದಲ್ಲಿ ಆದೇಶಿಸಿದಾಗ, ಅವರ ಪಾರ್ಥಿವ ಶರೀರವನ್ನು ಮೇನೆಯಲ್ಲಿ ಶಿಷ್ಯರು ತರುತ್ತಿರುವಾಗ ರಾಜ್ಯದ ಗಡಿಯಲ್ಲಿ ರಾಜಭಟರು ತಡೆಯಲು ತಮ್ಮ ಗುರುಗಳು ಧ್ಯಾನ ಮಾಡುತ್ತಿರುವುದಾಗಿ ಹೇಳಿದರು. ಪರದೆಯನ್ನು ಸರಿಸಲು ಭಟರಿಗೆ ಗುರುಗಳು ಸಾಕ್ಷಾತ್ತಾಗಿ ಧ್ಯಾನ ಮಾಡುತ್ತಿರುವಂತೆ ಗೋಚರವಾಯಿತು. ಅಲ್ಲದೇ, 'ಓಂ' ಎಂದು ಉಚ್ಚರಿಸುತ್ತಿರುವಂತೆ ತೋರಿತು. ಮಹಾಮಹಿಮರಾದ ಶ್ರೀಸತ್ಯಪರಾಯಣರು ಪವಾಡಮಾಡಿ ಸಂತೇಬಿದನೂರಿನಲ್ಲಿ ಅವರ ಬೃಂದಾವನವನ್ನೂ ಮಾಡಲು ಅನುವು ಮಾಡಿಕೊಟ್ಟರು.

ಶ್ರೀ ಸತ್ಯಪರಾಯಣರು, ಶ್ರೀ ಸತ್ಯಸಂಧರ ಪೂರ್ವಾಶ್ರಮದ ಮೊಮ್ಮಕ್ಕಳಾಗಿದ್ದರು. ಇವರಿಬ್ಬರು ಪ್ರಹ್ಲಾದಾಂಶರು. ಶ್ರೀ ಸತ್ಯಸಂಧರ ವೃಂದಾವನವು ತುಂಗಾನದಿಯ ದಡದಲ್ಲಿದ್ದರೆ ಶ್ರೀ ಸತ್ಯಪರಾಯಣರ ವೃಂದಾವನವು ಉತ್ತರಪಿನಾಕಿನಿ ನದಿ ದಡದಲ್ಲಿದೆ. ಇವರ ವೃಂದಾವನದೆದುರಿಗೆ ಅಶ್ವತ್ಥ ವೃಕ್ಷವಿದ್ದರೆ ಶ್ರೀ ಸತ್ಯಸಂಧರ ವೃಂದಾವನದ ಹತ್ತಿರದಲ್ಲಿಯೇ ಅಶ್ವತ್ಥ ವೃಕ್ಷವಿದೆ. ಶ್ರೀ ವಿಷ್ಣು ಸಹಸ್ರನಾಮಕ್ಕೆ ಶ್ರೀ ಸತ್ಯಸಂಧರು ಭಾಷ್ಯ ಬರೆದರೆ, ಇವರು ಶ್ರೀರಾಮ ಶಬ್ದಾರ್ಥಕ್ಕೆ 185 ರೀತಿಯಿಂದ ಅರ್ಥೈಸಿದ್ದಾರೆ. ಶ್ರೀ ಸತ್ಯಪರಾಯಣರು ಗಯಾವಾಡರುಗಳಿಂದ ಸತ್ಕರಿಸಿಕೊಂಡು ವಿಶೇಷ ದ್ರವ್ಯವನ್ನು ಅವರಿಂದ ಕಾಣಿಕೆಯಾಗಿ ಪಡೆದುಕೊಂಡರು. ಶ್ರೀ ಸತ್ಯಸಂಧರು ಗಯಾದಲ್ಲಿ ಶ್ರೀ ವಿಷ್ಣುಪಾದವಿರುವ ದೇವಾಲಯಕ್ಕೆ ಬೀಗ ಹಾಕಿರಲು ಹೊರಾಂಗಣದಲ್ಲಿಯೇ ಶ್ರೀ ವಿಷ್ಣುವನ್ನು ಸ್ತುತಿಸಿ ಬಾಗಿಲಿಗೆ ಹಾಕಿದ್ದ ಬೀಗ ತನಗೆ ತಾನೇ ತೆರೆಯುವಂತೆ ಮಾಡಿ ಗಯಾವಾಡರಿಗೆ ಬುದ್ಧಿ ಕಲಿಸಿ ಅವರಿಂದ ಹೇರಳವಾದ ಧನವನ್ನು ಪಡೆದರು. ಅವರಿಗೆ ಮುದ್ರಾಧಾರಣೆ ಮಾಡಿದರು. ಈಗಲೂ ಗಯಾ ಕ್ಷೇತ್ರದಲ್ಲಿ ಶ್ರೀ ವಿಷ್ಣುಪಾದಕ್ಕೆ ಶ್ರೀ ಉತ್ತರಾದಿ ಮಠದಿಂದ ಪ್ರತಿದಿನ ಸರಿಯಾಗಿ ಬೆಳಿಗ್ಗೆ 12 ಘಂಟೆಗೆ ಪೂಜೆ ನೈವೇದ್ಯ ನಡೆಯುತ್ತದೆ. ಪೂಜಾ ನೈವೇದ್ಯವನ್ನು ನೋಡುವ ಸೌಭಾಗ್ಯ ಈ ಲೇಖಕನಿಗೆ ಕಾರುಣ್ಯಮೂರ್ತಿ ಶ್ರೀ ಸೀತಾರಾಮನ ದಯೆಯಿಂದ ಸಿಕ್ಕಿತು.

ಋಗ್ಭಾಷ್ಯ – ತಾತ್ಪರ್ಯ ನಿರ್ಣಯ – ಭಾಗವತಗಳಲ್ಲಿ ಶ್ರೀ ಸತ್ಯ ಪರಾಯಣರಿಗೆ ಹೆಚ್ಚು ಆದರವಿತ್ತೆಂದು ತೋರುತ್ತದೆ. **ಶ್ರೀರಾಮ ಶಬ್ದಾರ್ಥ ರತ್ನಮಾಲಾದಲ್ಲಿ** ಅವರ ಕಾಲದಲ್ಲಿದ್ದ ವಾಸ್ತವಿಕತೆ ಹಾಗೂ ಆಗಿನ ಸಂಗತಿಗಳನ್ನು ತಿಳಿಸಿದ್ದಾರೆ. ಕದರಿ ನರಸಿಂಹದೇವರಿಗೆ ಹುಲಿ ಬಲಿಯನ್ನು ಕೊಡುತ್ತಿದ್ದುದು, ಹಾಗೆಯೇ ಮಲಪಹಾ ನದಿಯ ದಂಡೆಯ ಮೇಲೆ ಶ್ರೀ ಯಾದವಾರ್ಯರಿಂದ ಪ್ರತಿಷ್ಠಿತವಾಗಿರುವ ವೇದವ್ಯಾಸರನ್ನು ಮತ್ತು ವಿಠಲ ಹಾಗೂ ವಿಠೋಬ ಎಂದು ಕರೆಯುವ ಜನರನ್ನು ಪಂಡರೀ ಕ್ಷೇತ್ರವನ್ನು ಹೆಸರಿಸಿದ್ದಾರೆ.

**ಶ್ರೀ ಸತ್ಯಪರಾಯಣರು** ಹಾಗೂ **ಶ್ರೀ ಸತ್ಯವರರು** ನೆಲಸಿ ಪಾವನ ಗೊಳಿಸಿರುವ ಪುಣ್ಯಭೂಮಿ, ಯತಿವರರ ಬೀಡು, ಸಂತೇ ಬಿದನೂರು. ಇಲ್ಲಿ ಸಂಕರ್ಷಣ ಒಡೆಯರ ಅಂಶವು ಪ್ರತಿಷ್ಠಾಪಿಸಲಾಗಿದೆ. ಜನುಮೇಜಯರಾಯನಿಂದ ಪ್ರತಿಷ್ಟಿತವಾದ **ಶ್ರೀ ಮುಖ್ಯಪ್ರಾಣದೇವರು** ಬಹಳ ಸತ್ಯ. ಜಾಗೃತ ಸ್ಥಳ. ಶ್ರೀ ಪ್ರಾಣೇಶ ವಿಠಲದಾಸರು ಇಲ್ಲಿಯ ಶ್ರೀ ಮುಖ್ಯಪ್ರಾಣದೇವರ ಮೇಲೆ ದೇವರ ನಾಮಗಳನ್ನು ಮಾಡಿದ್ದಾರೆ. ದೇವಸ್ಥಾನದ ಪ್ರಾಕಾರದ ಗೋಡೆಯ ಮೇಲೆ ಹನುಮ ಭೀಮ ಮಧ್ವರನ್ನು ಕೆತ್ತಿದ್ದಾರೆ. ಶ್ರೀ ಮೂಲ ಪ್ರಾಣದೇವರ ಮೂರ್ತಿಯಲ್ಲದೇ ಇನ್ನೂ ನಾಲ್ಕು ಆಂಜನೇಯನ ವಿಗ್ರಹಗಳನ್ನು ಕೆತ್ತಿದೆ. ಇಲ್ಲಿ ಮಾಡುವ ಪಂಚಾಮೃತ ಅಭಿಷೇಕವು ನೇತ್ರಾನಂದಕರ. ಶ್ರೀ ಪ್ರಾಣದೇವರ ರಥೋತ್ಸವವು ವೈಶಾಖ ಶುದ್ಧಪೂರ್ಣಿಮೆ ನಡೆಯುತ್ತದೆ. ಸಹಸ್ರಾರು ಮಾಧ್ವರು, ಭಕ್ತಾದಿಗಳು ಬಂದು ಸೇರುತ್ತಾರೆ. ಆ ಉತ್ಸವವನ್ನು ನೋಡುವುದು ಒಂದು ಸುಕೃತ ಪುಣ್ಯವು. **ಶ್ರೀ ಸತ್ಯವರ ತೀರ್ಥರ** ಆರಾಧನೆ ಶ್ರಾವಣ ಶುದ್ಧ ಸಪ್ತಮಿ ನಡೆಯುತ್ತದೆ. ಮುಖ್ಯ ರಸ್ತೆಯಿಂದ ದೇವಸ್ಥಾನದವರೆವಿಗೂ ಬಸ್ಸಿನ ಸೌಕರ್ಯವಿದೆ. ದೊಡ್ಡ ಮಠದಲ್ಲಿ ಸುಮಾರು 200 ರಿಂದ 300 ಜನ ಊಟ ಮಾಡುವಷ್ಟು ಜಾಗವಿದ್ದು ಪಾಕ ಶಾಲೆಯು ಇದೆ. ಶ್ರೀ ಸತ್ಯಪರಾಯಣತೀರ್ಥರ ಮಠವು ಅವರ ವಂಶಸ್ಥ ಅರ್ಚಕರಾದ **ಶ್ರೀ ಹೆಚ್.ಎಸ್. ಶ್ರೀನಿವಾಸಾಚಾರ್** ಹಾಗೂ ವಿಶೇಷತಃ ಪ್ರಸ್ತುತ ಬೆಂಗಳೂರಿನ ಚಿಕ್ಕಪೇಟೆ ಶ್ರೀಮದುತ್ತರಾದಿ ಮಠದಲ್ಲಿ

ಶ್ರೀಸತ್ಯಧರ್ಮತೀರ್ಥ ಪ್ರತಿಷ್ಠಿತ ಪ್ರಾಣದೇವರನ್ನು ಪೂಜಿಸುತ್ತಿರುವ ಶ್ರೀ ಪವನಾಚಾರ್ಯರ ಅವಿರತ ಶ್ರಮದಿಂದ ಜೀರ್ಣೋದ್ಧಾರವಾಗುತ್ತಾ ಇದೆ. ಮಹಾಮಹಿಮರಾದ **ಶ್ರೀಸತ್ಯಾತ್ಮತೀರ್ಥರ** ಅನುಗ್ರಹ ಹಾಗೂ ನೀಡಿದ ಸಹಾಯ ಹಸ್ತದಿಂದ ಹಾಗೂ ದಾನಿಗಳ ನೆರವಿನಿಂದ ಈ ಮಹತ್ತರ ಕೆಲಸವಾಗುತ್ತಿದೆ. ಈಗ ಇಲ್ಲಿ ಶುಭಕಾರ್ಯಗಳನ್ನು ಅಲ್ಲದೇ ಇತರೆ ಕಾರ್ಯಗಳನ್ನು ಮಾಡಲು ವ್ಯವಸ್ಥೆ ಮಾಡಲಾಗಿದೆ. ಹೆಚ್ಚಿನ ವಿವರಗಳಿಗೆ **ಶ್ರೀ ಹೆಚ್.ಎಸ್. ಶ್ರೀನಿವಾಸಾಚಾರ್ –09866372460 ಸಂತೇಬಿದನೂರು ಅಥವಾ ಶ್ರೀ ಪವನಾಚಾರ್ 98451 96899 / 98441 76999 ಬೆಂಗಳೂರು–53.** ಇವರನ್ನು ಸಂಪರ್ಕಿಸಬಹುದು.

**ಶ್ರೀ ಸತ್ಯಪರಾಯಣರ ವೃಂದಾವನ ಪ್ರದಕ್ಷಿಣೆಯಿಂದ ಎಲ್ಲಾ ಪವಿತ್ರ ನದಿಗಳ ಸ್ನಾನದ ಪುಣ್ಯ ಫಲವು ಲಭಿಸುವುದು. ಸಕಲ ಶಾಸ್ತ್ರ ಹಾಗೂ ಅರ್ಥಗಳು ಇವರ ನಾಮ ಸ್ಮರಣೆಯಿಂದ ದೊರಕುವುದು. ಸರ್ವದೋಷಗಳನ್ನು ನಿವಾರಿಸುವ** ಮಹಾನುಭಾವರಿವರು. ದ್ವೈತ ಮತವೆಂಬ ಮಹಾಸಾಗರಕ್ಕೆ ರಾಕಾಶಶಾಂಕರು. ದೋಷಲೇಶರು. ಪರಮಾತ್ಮನನ್ನು ಸಾಕ್ಷಾತ್ಕರಿಸಿ ಕೊಂಡಂಥವರು. ಭೂತ, ಪ್ರೇತ, ಪಿಶಾಚಾದಿ ದುಷ್ಟ ಗ್ರಹಗಳನ್ನು ನಿಗ್ರಹ ಮಾಡುವಂತಹ, ಮಹಾಮಹಿಮರು, ಸತ್ಸಂತಾನ, ಹರಿಭಕ್ತಿ, ಆರೋಗ್ಯ ಜ್ಞಾನ, ಐಶ್ವರ್ಯವನ್ನು ಕೊಡುವ ಕಾಮಧೇನುವಂತಹವರು. ಸರ್ವರೋಗ, ಭಯನಿವಾರಕರು. ಇವರ ಪಾದ ಪದ್ಮಯುಗಗಳನ್ನು ನೆನಸಿಕೊಂಡು "**ಶ್ರೀ ಸತ್ಯಪರಾಯಣ**" ಎಂದು ಪರಮ ಪಾವನವಾದ ನಾಮವನ್ನು ನಿತ್ಯದಲ್ಲಿ ಯಾರು ಪಠಿಸುವರೋ ಅಂತಹವರಿಗೆ ಅತುಲ್ಯೈಶ್ವರ್ಯವು ದೊರಕಿ ಅವರ ಇಷ್ಟಾರ್ಥಗಳು ಸಿದ್ಧಿಸುವುದರಲ್ಲಿ ಲವಲೇಶವು ಸಂಶಯವಿಲ್ಲ. ಶ್ರೀ ಸತ್ಯಪರಾಯಣರು ಶ್ರೀಪ್ರಹ್ಲಾದ ಅಂಶದವರೇ ಆದ್ದರಿಂದ ಮಂತ್ರಾಲಯಕ್ಕೆ ಹೋಗಲು ಆಗದವರು ಇವರ ಬೃಂದಾವನವನ್ನು ಸೇವಿಸಿ ಸಕಲಾಭೀಷ್ಟವನ್ನು ಪಡೆಯಬಹುದು ಎಂದು ಸ್ಥಳಿಯರ ಹೇಳಿಕೆ.

**ಸದಾ ದಾನೇ ದಾನೇ ಜಗತಿ ರಚಿತೇ ಯೇನ ಸತತಂ**
**ತ್ರಪಾವಿಷ್ಣೋ ವಿಷ್ಣೋ ದಿವಮಮಿತ ಚಿಂತಾಕುಲಧಿಯಾ**

**ಪುರಾವ್ಯರ್ಥಂ ವ್ಯರ್ಥಂ ಸುರಮಣಿರಗಾಂ ನಾಮ ಸತತಂ**
**ಸ್ಮೃತಾ ಸಕ್ತೇ ಸಕ್ತೇ ಭಜತು ಮಮ ಚಿತ್ತಂ ಪ್ರವಣತಾಂ**

ದಾನ ಪ್ರವತ್ತಿಯೇ ಇಲ್ಲದ ಜಗತ್ತನ್ನು ಸತ್ಯಪರಾಯಣರು ಸದಾ ದಾನಯುಕ್ತವನ್ನಾಗಿ ಮಾಡಿದಾಗ ಚಿಂತಾಮಣಿಯು ನಾಚಿತು. ಆ ಹೆಸರು ತನಗೆ ಸರಿಯಲ್ಲವೆಂದು ತುಂಬಾ ವ್ಯಾಕುಲಗೊಂಡು ಶಾಶ್ವತವಾಗಿ ಸ್ವರ್ಗಕ್ಕೆ ಮರಳಿತು. **ಅಂಥ ಮಹಾಮಹಿಮಾವಂತರಾದ ಶ್ರೀ ಸತ್ಯಪರಾಯಣ ತೀರ್ಥರನ್ನು ಸ್ಮರಿಸುವುದೇ ಒಂದು ಪುಣ್ಯ**

---

## ಶ್ರೀ ಜಯರಾಮಾಚಾರ್ಯ ಕೃತಂ
## ಶ್ರೀ ಸತ್ಯಪರಾಯಣಾಷ್ಟಕಂ

ಸತ್ಯತುಷ್ಟ ಸಿಂಧುನಾಥ ಜಾತದಿವ್ಯ ಕೌಸ್ತುಭಂ
ಬ್ರಹ್ಮಸೂತ್ರ ಸಂಗಭಾವ ರಾಮಶಬ್ದ ಬೋಧಕಂ
ದೋಲಿಕಾಸ್ಥ ರಾಘವಂ ಪ್ರದೋಲಯಂತಮಾದರಾತ್
ಸತ್ಪರಾಯಣಾಭಿಧೇಯ ಸನ್ಮುನಿಂ ಭಜೇನಿಶಂ ॥ 1 ॥

ಭೂಮಕಾಮ ಸೋಮತುಂಡ ರಾಮಚಂದ್ರ ಸೇವಕಂ
ಶ್ರೀಮದಾರ್ಯವಂಶ ಸಿಂಧು ಪೂರ್ಣಚಂದ್ರ ಸನ್ನಿಭಂ
ಭೂಮಿದೇವ ನೀಲಕಂಠ ನೀಲನೀರದೋಪಮಂ
ಸತ್ಪರಾಯಣಾಭಿಧೇಯ ಸನ್ಮುನಿಂ ಭಜೇನಿಶಂ ॥ 2 ॥

ದುಷ್ಟಮಾಯಿ ದಂತಿ ಪುಷ್ಟ ಕುಂಭಭೇದನೇ ಹರಿಂ
ಸ್ವೇಷ್ಟಶಿಷ್ಟ ಸೌಖ್ಯಪುಷ್ಟಿ ಕಾರಣಂ ದಯಾನಿಧಿಂ
ಶಿಷ್ಟಲೋಕ ಜಿಷ್ಣು ಕಾಮಿತೇಷ್ಟ ವೃಷ್ಟಿ ಪುಷ್ಟಿದಂ
ಸತ್ಪರಾಯಣಾಭಿಧೇಯ ಸನ್ಮುನಿಂ ಭಜೇನಿಶಂ ॥ 3 ॥

ಕೃಷ್ಣರಾಜಮುಖ್ಯ ಮೌಲಿರತ್ನ ಘೃಷ್ಟ ಪಾದುಕಂ
ಜಿಷ್ಣು ಸರ್ವಭಕ್ತ ಸಂಘ ವಂದಿತಾಂಘ್ರಿ ವಾರಿಜಂ
ವಿಷ್ಣುಪಾದ ಪುಂಡರೀಕ ಚಂಚರೀಕ ಸನ್ನಿಭಂ
ಸತ್ಪರಾಯಣಾಭಿಧೇಯ ಸನ್ಮುನಿಂ ಭಜೇನಿಶಂ ॥ 4 ॥

ಭಾವಭಾವ ಭಾವಯುಕ್ತ ಭಿಕ್ಷುರಾಜ ವಂದಿತಂ
ಭಾವ ಭಾವ ಭಾವ ಭಾವ ಜಾತ ಭೂರಿ ಭಾವಕಂ
ಭಾವಪುತ್ರ ಧಿಕ್ಕೃತಾತಿದಾತೃತಾ ವಿರಾಜಿತಂ
ಸತ್ಪರಾಯಣಾಭಿಧೇಯ ಸನ್ಮುನಿಂ ಭಜೇನಿಶಂ ॥ 5 ॥

ಕೃಷ್ಣಭಕ್ತ ಕೃಷ್ಣ ಸಹಜ ಕೃಷ್ಣಕೀರ್ತಿ ಧಿಕ್ಕೃತಂ
ಕೃಷ್ಣ ಪ್ರಮುಖ ಜಿಷ್ಣು ಸೇವಯಾ ಸುಹೃಷ್ಟಮಾನಸಂ
ಧೃಷ್ಣು ವೈಷ್ಣವಾರಿ ವ್ಯೂಹಗೋತ್ರ ವರ ಕಲ್ಪಕಂ
ಸತ್ಪರಾಯಣಾಭಿಧೇಯ ಸನ್ಮುನಿಂ ಭಜೇನಿಶಂ ॥ 6 ॥

ಕ್ಷೇತ್ರ ಕ್ಷೇತ್ರ ಕ್ಷೇತ್ರ ಗಮನ ಶುದ್ಧ ಕ್ಷೇತ್ರ ಶ್ರೀಕರಂ
ಕ್ಷೇತ್ರ ಸರ್ವಕ್ಷೇತ್ರ ವಾಸಿ ಕ್ಷೇತ್ರಪೂರ್ವ ದರ್ಶನಂ
ಕ್ಷೇತ್ರ ದಿವ್ಯಚಿತ್ರ ಮಹಿಮ ಸಿಂಧು ಸಿಂಧು ಪೋತಕಂ
ಸತ್ಪರಾಯಣಾಭಿಧೇಯ ಸನ್ಮುನಿಂ ಭಜೇನಿಶಂ ॥ 7 ॥

ವಂದನಾದಿ ಕರ್ಮಸಕ್ತ ಮನುಜ ಕಾಮಿತೇಷ್ಟದಂ
ಸುಂದರಾಂಗ ಪ್ರಣತಭಕ್ತ ಸರ್ವರೋಗವಾರಣಂ
ಮಂದಬುದ್ಧಿ ಜಯಸುಶಬ್ದ ರಾಮವಿರಚಿತಾಷ್ಟಕಂ
ಯಃ ಪಠೇತ್ ಸಸರ್ವಸಿದ್ಧಿ ಮಾಪ್ನುಯಾದನುಗ್ರಹಾತ್ ॥ 8 ॥

**॥ ಇತಿ ಶ್ರೀ ಸತ್ಯಪರಾಯಣಾಷ್ಟಕಂ ಸಂಪೂರ್ಣಂ ॥**

## ಶ್ರೀ ನರಸಿಂಹಾರ್ಯಕೃತಂ ಶ್ರೀ ಸತ್ಯಪರಾಯಣಾಷ್ಟಕಂ

ನಿಜಾರಾಮೇ ರಾಮೇ ಜನಕತನಯಾಪಾಂಗ ಕುಸುಮೈ :
ಸದಾ ಪೂಜ್ಯೇ ಪೂಜ್ಯೇ ಚರಣ ಪರಿಚರ್ಯಾದಿಭಿರಲಂ ॥
ಮಹಾಭಕ್ತ್ಯಾ ಭಕ್ತ್ಯಾ ಕಮಲಜಭವೇಂದ್ರಾದಿಕ ಸುರೈಃ
ಖುತಾಸಕ್ತೇ ಸಕ್ತೇ ಭವತು ಮಮ ಚಿತ್ತಂ ಪ್ರವಣತಾಂ ॥ 1 ॥

ಮಹಾಬೋಧೋ ಬೋಧೋ ಭವತಿ ಯದಪಾಂಗಾಲ್ಪ ವಿಷಯಃ
ಪ್ರಭಾತೇ ಭಾತೇ ಯತ್ಪದ ಕಮಲದೃಗ್ ಯಾತಿ ಸುಖಿತಾಂ ॥
ಕೃಪಾ ಪಾರೇ ಪಾರೇ ಹರಿಪದ ಸಪರ್ಯಾದಿಕ ಗುಣೈಃ
ಖುತಾಸಕ್ತೇ ಸಕ್ತೇ ಭವತು ಮಮ ಚಿತ್ತಂ ಪ್ರವಣತಾಂ ॥ 2 ॥

ಯತೋ ವ್ಯಕ್ತಾ ವ್ಯಕ್ತಾ ದಶರಥ ಸುತಾಖ್ಯಾರ್ಥಪರತಾ
ಮಹಾಪೂರ್ವಂ ಪೂರ್ವಂ ವಿಮಲತರ ಸೂತ್ರಾಕ್ಷರತತೇಃ ॥
ಹರೇಃ ಪಾದೇ ಪಾದೇ ರಚಿತ ನಿಜ ಚಿತ್ತಾವಸಥಕೇ
ಸ್ಮೃತಾ ಸಕ್ತೇ ಸಕ್ತೇ ಭಜತು ಮಮ ಚಿತ್ತಂ ಪ್ರವಣತಾಂ ॥ 3 ॥

ರಮಾಗಾರೇ ಗಾರೇವಿರತ ಚರಣಾಂಭೋರುಹ ಜುಷಾಂ
ಸುಖಾಗಾರೇ ಗಾರೇ ಗಮಿತ ಸ್ತುತಿಭಿಃ ಸೇವಿತ ತನೌ ॥
ಸದಾಜಾತೇ ಜಾತೇ ಶ್ರುತಿಚಯ ಪುಷಾ ವ್ಯಾಸವಪುಷಾ
ಸ್ಮೃತಾಸಕ್ತೇ ಸಕ್ತೇ ಭಜತು ಮಮ ಚಿತ್ತಂ ಪ್ರವಣತಾಂ ॥ 4 ॥

ನಿಜಾಮೋದೇ ಮೋದೇತರ ವಿರಹಿತೇ ಸ್ಯಾದತಿತರಾಂ
ಸದಾಭಕ್ತಿರ್ಭಕ್ತಿಃ ಪರಮಕೃಪಯಾ ಯಸ್ಯಭಜತಾಂ ॥
ನಿಜಾಮೋದೇ ಮೋದೇತರವಿರಹಿತೇ ಹೇತರಚಲಾ
ಸ್ಮೃತಾಸಕ್ತೇ ಸಕ್ತೇ ಭಜತು ಮಮ ಚಿತ್ತಂ ಪ್ರವಣತಾಂ ॥ 5 ॥

ಸದಾ ದಾನೇ ದಾನೇ ಜಗತಿರಚಿತೇ ಯೇನ ಸತತಂ
ತ್ರಪಾವಿಷ್ಟೋ ವಿಷ್ಟೋ ದಿವಮಮಿತ ಚಿಂತಾಕುಲಧಿಯಾ ॥
ಪುರಾ ವ್ಯರ್ಥಂ ವ್ಯರ್ಥಂ ಸುರಮಣಿರಗಾಂ ನಾಮ ಸತತಂ
ಸ್ಮೃತಾಸಕ್ತೇ ಸಕ್ತೇ ಭಜತು ಮಮ ಚಿತ್ತಂ ಪ್ರವಣತಾಂ ॥ 6 ॥

ದಿವಂಯಾತೋಯಾತೋ ವಿತರಣಯಶಃ ಶ್ರುತ್ ಸುಮನಸಾಂ
ತ್ರಪಾಯುಕ್ತೋ ಯುಕ್ತೋ ಧರತಣಿಲವಾಸೋಮ ಇತಿ ನೋ ॥
ಮುಹುಸ್ತಸ್ಮಿಂಸ್ತಸಿನ್ ಬುಧಜನಪುಷೋ ಯಸ್ಯನಿತರಾಂ
ಖುತಾಸಕ್ತೇ ಸಕ್ತೇ ಭಜತು ಮಮ ಚಿತ್ತಂ ಪ್ರವಣತಾಂ ॥ 7 ॥

ಬುಧಾಧಾರೇ ಧಾರೇ ಸೃಜತಿ ಸತತಂ ಜ್ಞಾನಧನಯೋ
ರಮಾಕಾಂತೇ ಕಾಂತೇ ನಿರತಜನತಾಯೈ ಯದಿ ಪುಮಾನ್ ||
ಕೃಪಾಲೇಶೋಲೇಶೋ ಭವತಿ ಹರಿ ಭಕ್ತ್ಯಾದಿಕ ಗುಣೈಃ
ಖಿತಾಸಕ್ತೇ ಸಕ್ತೇ ಭಜತು ಮಮ ಚಿತ್ತಂ ಪ್ರವಣತಾಂ || 8 ||

ಅಶ್ವತ್ಥಾರ್ಯಾನ್ವಯಾಂಭೋಧಿ ವಿಧು ಶೇಷಾರ್ಯಸೂನುನಾ
ನರಸಿಂಹೇನರಚಿತಾ ಗುರುಸ್ತುತಿರಿಯಂ ಶುಭಾ
ಸರ್ವಕಾಲೇಷು ಪಠತಾಂ ಶುಭದಾಸ್ಯಾದ್ಧಯಾವಶಾತ್
ಗುರೋಸ್ತತ್ಪಾದ ಕಮಲಂ ಭಜತಾಂ ಪ್ರೀತಿ ಪೂರ್ವಕಂ || 9 ||

|| ಇತಿ ಶ್ರೀ ಸತ್ಯಪರಾಯಣಾಷ್ಟಕಂ ಸಂಪೂರ್ಣಂ ||

---

## ಶ್ರೀ ಸತ್ಯಕ್ಷೇತ್ರ ಸಂತೇಬಿದನೂರು

ಸಂತ ಸಾಧು ಜನರ ನೆಲೆಬೀಡು ಸಂತೇಬಿದನೂರು
ಮೈತ್ರೇಯರ ತಪೋವನವಿದು ಸಂತೇಬಿದನೂರು
ಸತ್ಯಕ್ಷೇತ್ರವೆಂದೆನಿಸಿರುವ ಪುಣ್ಯಕ್ಷೇತ್ರ ಈ ಊರು

ಜನಮೇಜಯ ಪ್ರತಿಷ್ಠಿತ ಮುಖ್ಯಪ್ರಾಣ ನೆಲಸಿದನೂರು
ಬ್ರಹ್ಮಕರಾರ್ಚಿತ ಶ್ರೀಮೂಲರಾಮ ಸೀತಾದೇವಿಯರನು
ನಿರಸನವ್ರತ ಕೈಗೊಂಡು ಒಲಿಸಿಕೊಂಡ ಶ್ರೀ ಸತ್ಯವರೂರು ಈ ಊರು

ಪಿಡಗರ ಕಾಟದಿಂದ ಪಾರಾಗಲು ನಿರುತ ಭಕುತಿಯೊಳು
ಹನುಮನ ಧ್ಯಾನಿಸಿದ ಆನಂದತೀರ್ಥರ ಕಂದ, ಸತ್ಯಸಂತುಷ್ಟರ
ಕರಕಮಲ ಸಂಜಾತ ಶ್ರೀ ಸತ್ಯಪರಾಯಣರೂರು, ಈ ಊರು

ಗಿರಿಜೆ ಬಾಯಾರಿ ದಾಹದಿಂದ ತೃಷೆಯೆನಲು ಹರನು
ಪಿನಾಕವನ್ನಪ್ಪಳಿಸಲು ಪುಟ್ಟಿದ ಪಿನಾಕಿ ನದಿಯು
ಧರೆಯನು ಪಾವನಗೊಳಿಸುತ್ತಿರುವ ಪಿನಾಕಿಯ ಊರು, ಈ ಊರು

ಸಂಜೀವರಾಯನು ಸತ್ಯವರರು ಸತ್ಯಪರಾಯಣರು
ನೆಲಸಿ ಭಕುತ ಜನರ ಅರ್ಥಿಯಿಂದಲೀ ಒಲಿದು
ಸಂತುಷ್ಟಗೊಳಿಸುತ್ತಿರುವ ಸಂತೇಬಿದನೂರು, ಈ ಊರು

ದೋಷರಾಶಿಗಳ ತೂಲರಾಶಿಗೆ ಅನಿಲವು ತಲುಗಲು
ಭಸ್ಮವಾಗುವಂತೆಯೆಸಗುವ ಮಹಾಮಹಿಮ ಮುಖ್ಯಪ್ರಾಣ
ಸತ್ಯವರ ಸತ್ಯಪರಾಯಣತೀರ್ಥರ ಭಕುತ ಸುಶೀಲಾ ಕುಮಾರ
ಬದರೀನಾಥನೂರು, ಈ ಊರು

**ಶ್ರೀ ಮೂಲರಾಮೋ ವಿಜಯತೇ**

# ತಪೋವೈರಾಗ್ಯ ಶ್ರೇಷ್ಠರು
# ಶ್ರೀಸತ್ಯಸಂಧತೀರ್ಥರು



ಶ್ರೀ ಶ್ರೀ ಸತ್ಯಸಂಧತೀರ್ಥರ ವೃಂದಾವನ, ಮಹಿಷಿ (ಶಿವಮೊಗ್ಗ)

**ಸುಶೀಲಾ ಪ್ರಕಾಶನ**
"ಭೀಮಸೇನಾ", ನಂ.52-1/71-1, ಗಾಂಧಿಬಜಾರ್
ಬೆಂಗಳೂರು-04, ಮೊಬೈಲ್ : 9448409399